




೪೯

'ನಾಡಿಗೆ ನಮಸ್ಕಾರ' ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ

ಸ್ತ್ರೀಪರ ಚಿಂತಕಿ

# ಪಂಡಿತ ರಮಾಬಾಯಿ ಸರಸ್ವತಿ



ಸೀತಾ ಬಾಪಟ್






'ನಾಡಿಗೆ ನಮಸ್ಕಾರ'

ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ

ಕುಸುಮ : ೪೯

## ಸ್ತ್ರೀಪರ ಚಿಂತಕಿ

# ಪಂಡಿತ ರಮಾಬಾಯಿ ಸರಸ್ವತಿ

ಸೀತಾ ಬಾಪಟ್



ಕಾಂತಾವರ ಕನ್ನಡ ಸಂಘ (ರಿ.)
ಕಾಂತಾವರ - ೫೭೪ ೧೨೯
ಕಾರ್ಕಳ, ಉಡುಪಿ ಜಿಲ್ಲೆ
ದೂರವಾಣಿ : ೦೮೨೫೮-೨೭೬೨೧೬
೯೯೦೦೭೦೧೬೬೬

**Sthreepara Chinthaki Panditha Ramabai**
By Seetha Bapat. Published by Kannada Sangha Kanthavara (R), P.O. Kanthavara - 574 129, Karkala, Udupi Dist. Mobile : 9900701666

ಅಧಿಕೃತ ಮಾರಾಟಗಾರರು : **ಕೊಡೆಂಕಿರಿ ಪ್ರಕಾಶನ**
ನರಿಮೊಗರು, ಪುತ್ತೂರು - ೫೭೪ ೨೦೨ (ದ.ಕ.)
ದೂರವಾಣಿ : ೯೪೮೦೪೫೧೫೭೦

First Impression : 2010

Pages : 52



Price : Rs. 33-00

Cover Design : **Kalloor Nagesh**

Page Designed & Printed at : **Aakrithi Prints**
K.S. Rao Road, Mangalore - 575 001
Tel. : 0824 2443002

# ನಾಡಿಗೆ ನಮಸ್ಕಾರ

ನಮ್ಮ ನಾಡು ಅಂದಾಕ್ಷಣ ನಮ್ಮ ಕಣ್ಣ ಮುಂದೆ ಬರುವುದು ನೆಲ ಮತ್ತು ಜಲ. ಅವುಗಳಷ್ಟೇ ಅಲ್ಲ, ನಮ್ಮ ಮನಸ್ಸೂ ಈ ನಾಡಿನ ಒಂದು ಭಾಗ ಎಂಬ ಭಾವನೆಯ ರೂಪಕವಾಗಿ ನಮ್ಮ ನಾಡು ಸುವರ್ಣ ಕರ್ನಾಟಕದ ಸಂಭ್ರಮದಲ್ಲಿದ್ದ ಸಮಯದಲ್ಲಿ ಕಾಂತಾವರ ಕನ್ನಡ ಸಂಘವು 'ನಾಡಿಗೆ ನಮಸ್ಕಾರ' ಎನ್ನುವ ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆಯನ್ನು ಯಾಕೆ ನಾಡಿಗೆ ಅರ್ಪಿಸಬಾರದು ಎಂದು ಸಂಕಲ್ಪಿಸಿತು.

ಕಾಂತಾವರ ಎನ್ನುವುದು ಉಡುಪಿ ಜಿಲ್ಲೆಯ ಕಾರ್ಕಳ ಸಮೀಪದ ಒಂದು ಹಳ್ಳಿಯ ಹೆಸರು. ಊರಿನ ಹೆಸರನ್ನೇ ಮುಖ್ಯವಾಗಿರಿಸಿಕೊಂಡು ಹುಟ್ಟಿದ (೨೬ ಮೇ ೧೯೭೬) ಕನ್ನಡ ಸಂಘಕ್ಕೆ ಮೂವತ್ತರ ಯೌವನದ ಸಂದರ್ಭದಲ್ಲಿ ನಮ್ಮ ನಾಡು ಸುವರ್ಣ ಸಂಭ್ರಮವನ್ನು ಆಚರಿಸುವಂಥ ಸಂದರ್ಭವೂ ಒದಗಿ ಬಂತು. ಇದು ಯೋಗಾಯೋಗ. ಇವೆರಡನ್ನು ಶಾಶ್ವತವಾಗಿ ನೆನಪಿನಲ್ಲಿ ಇಟ್ಟುಕೊಳ್ಳಬೇಕೆಂಬುದಕ್ಕಾಗಿ ಇರುವುದು ಈ ಮಾಲೆ.

ಈಗಲೂ ಹಳ್ಳಿಯಾಗಿಯೇ ಇರುವ ಈ ಊರಿನ ಹೆಸರಿನ ಗಡಿಗಳನ್ನು ಹರಿದೊಗೆದದ್ದು ಈ ಸಂಘ. ಅದು ಹುಟ್ಟಿದ ಮೊದಲ ವರುಷದಲ್ಲೇ (೧೯೭೬) ಮಾಡಿದ ಸಾಹಸ 'ದಕ್ಷಿಣ ಕನ್ನಡ ಕಾವ್ಯ ೧೯೭೦ - ೭೬' ಎಂಬ (ಆಗ ಯಾವ ಜಿಲ್ಲೆಯಲ್ಲೂ ಆಗದೇ ಇದ್ದ) ಜಿಲ್ಲೆಯ ಕಾವ್ಯ ಪರಂಪರೆಯನ್ನು ಗುರುತಿಸುವ ಆ್ಯಂಥಲಾಜಿಯ ಪ್ರಕಟಣೆ. ಆಮೇಲೆ ಸಾಹಿತ್ಯಿಕ ವಿಚಾರಗಳನ್ನು ಜನಸಾಮಾನ್ಯರ ಮನೆಬಾಗಿಲಿಗೆ ತರುವ ಉದ್ದೇಶದ ಉಪನ್ಯಾಸದ ಮಾಲೆ, ಗ್ರಂಥ ಪ್ರಕಟಣೆ, ವಿಚಾರಗೋಷ್ಠಿ ಸಾಧಕರಿಗೆ ಸನ್ಮಾನ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ತೊಡಗಿತು. ನಡುವೆ ನಂದಳಿಕೆಯ ಮುದ್ದಣನ ಹೆಸರಿನಲ್ಲಿ 'ಮುದ್ದಣ ಸ್ಮಾರಕ ಕಾವ್ಯಸ್ಪರ್ಧೆ'ಯನ್ನೂ ಪ್ರಾರಂಭಿಸಿತು (೧೯೭೯). ತನ್ಮೂಲಕ ಖಾಸಗಿಯಾಗಿ ಯಾವುದೇ ಪ್ರಶಸ್ತಿಗಳಿಲ್ಲದ ಆ ದಿನಗಳಲ್ಲಿ ಸರಕಾರೇತರವಾಗಿಯೂ ಪ್ರಶಸ್ತಿಗಳನ್ನು ನೀಡಲು ಸಾಧ್ಯ (ನೀಡುವುದು ಅಗತ್ಯ) ಎಂಬ ಪರಿಕಲ್ಪನೆಯನ್ನೂ ಹುಟ್ಟು ಹಾಕಿತು.

ಸಂಘಕ್ಕೆ ೨೫ ವರುಷಗಳು ತುಂಬಿದ ಸಂದರ್ಭದಲ್ಲಿ (೧೫ ಎಪ್ರಿಲ್ ೨೦೦೧) ರಾಜ್ಯ ಮಟ್ಟದ ಸಾಹಿತ್ಯ ಸಂಸ್ಕೃತಿ ಸಮ್ಮೇಳನ ಮತ್ತು ಅದರ ಸವಿ ನೆನಪಿಗಾಗಿ ಮತ್ತೆ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' (೧೯೦೦ - ೨೦೦೦) ಎಂಬ ಇನ್ನೊಂದು ಬೃಹತ್ ಗ್ರಂಥವನ್ನು (ಲಕ್ಷ ರೂಪಾಯಿಗೂ ವೆಚ್ಚದಲ್ಲಿ) ಪ್ರಕಟಿಸಲು ಸಂಘವು ಮುಂದಾಯಿತು. ಒಂದು ಜಿಲ್ಲೆಯ ಗಡಿಯೊಳಗಿನ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಅಧ್ಯಯನ ಮತ್ತು ಅಂಥವುಗಳ ಪ್ರಕಾಶನವು ನಾಡನ್ನು ಅರಿಯುವ ಮತ್ತು ಎಚ್ಚರಿಸುವ ಕಾಯಕವೂ ಹೌದೆನ್ನುವಂಥ ಮನಸ್ಸೇ ಇಂಥ ಚಟುವಟಿಕೆಗಳಿಗೆ ಕಾರಣ. ಕಾಂತಾವರದ ಮಣ್ಣಿಗೂ ಕರ್ನಾಟಕದ ಏಕೀಕರಣಕ್ಕೂ ನೇರ ಸಂಬಂಧ ಉಂಟು. ಈ ಮಣ್ಣಿನ ಮಗ, ಕಾಂತಾವರ ಬಾರಾಡಿಬೀಡು (ಕೆ.ಬಿ.) ಜಿನರಾಜ ಹೆಗ್ಡೆ ಅವರು ಕರ್ನಾಟಕದ ಏಕೀಕರಣದ ಅಗ್ರಗಣ್ಯ ನಾಯಕರಲ್ಲಿ ಒಬ್ಬರು. ಅವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಕನ್ನಡ ಸಂಘವು ಅವರ ನೆನಪು ಶಾಶ್ವತವಾಗಿರು

ವಂತೆ ಕಾಂತಾವರದಲ್ಲಿ ೨೫ ಲಕ್ಷ ರೂಪಾಯಿಗಳ ವೆಚ್ಚದಲ್ಲಿ (ಸರಕಾರದ ಸಹಾಯಧನ ೧೨ ಲಕ್ಷ ರೂಪಾಯಿಗಳು ಸೇರಿ) 'ಕನ್ನಡ ಭವನ'ವೊಂದನ್ನು ನಿರ್ಮಿಸಿತು. ಮುಂದೆ ಆ ಭವನದಲ್ಲೇ 'ಮುದ್ದಣ ಸ್ಮಾರಕ ಕಾವ್ಯ ಪ್ರಶಸ್ತಿ ಯೋಜನೆ'ಯ ಬೆಳ್ಳಿಹಬ್ಬವನ್ನು (೭ ನವೆಂಬರ್ ೨೦೦೪) ಪ್ರಶಸ್ತಿ ಪುರಸ್ಕೃತ ಇಪ್ಪತ್ತೈದು ಕವಿಗಳ ಸಮಕ್ಷಮದಲ್ಲಿ ನಡೆಸಿ ಅಪರೂಪದ ದಾಖಲೆ ನಿರ್ಮಿಸಿತು.

ನಮ್ಮ ಈ ಚಟುವಟಿಕೆಗಳನ್ನು ನೋಡಿ ಸಂಭ್ರಮಗೊಂಡ ಮೂಡಬಿದ್ರೆಯ ಶ್ರೀ ಸಿ.ಕೆ. ಪಡಿವಾಳ್ ಎಂಬ ಸದ್ಗೃಹಸ್ಥರು ತಮ್ಮ ಉದ್ಯಮದ ಕೊಡುಗೆಯೆಂದು ಕನ್ನಡ ಸಂಘಕ್ಕೆ ಪ್ರತಿ ವರುಷವೂ ಒಂದು ಲಕ್ಷ ರೂ.ಗಳ ನೆರವನ್ನು ನೀಡಲು ತಾವಾಗಿಯೇ ಮುಂದೆ ಬಂದರು. ಇದರಿಂದಾಗಿ ೨೦೦೮ರಿಂದ ತಿಂಗಳಿಗೊಂದರಂತೆ 'ನುಡಿನಮನ' ಎಂಬ ಸಾಹಿತ್ಯ ಸಂಸ್ಕೃತಿ ಸಂವರ್ಧನ ಕಾರ್ಯಕ್ರಮವೊಂದನ್ನು ಸಂಘವು ಪ್ರಾರಂಭಿಸಿದೆ.

ಪ್ರತಿಯೊಂದು ಜಿಲ್ಲೆಗಳಲ್ಲೂ ಅಲ್ಲಿನ ಸಾಧಕರ ಅಧ್ಯಯನವು ನಾಡಿನ ಒಟ್ಟು ಸಂಸ್ಕೃತಿಯ ಅನಾವರಣಕ್ಕೆ ಪೂರಕ ಎಂಬ ಹಿನ್ನೆಲೆಯಲ್ಲಿ ಸಂಘವು ಕಾಸರಗೋಡೂ ಸೇರಿದಂತೆ ಅಖಂಡ ದಕ್ಷಿಣ ಕನ್ನಡವು ಕನ್ನಡಕ್ಕೆ ನೀಡಿದ ಒಟ್ಟೂ ಕೊಡುಗೆಗಳ ಹಿನ್ನೆಲೆಯಲ್ಲಿ ಇಲ್ಲಿನ ನೂರಾರು ಸಾಧಕರಲ್ಲಿ ಆಯ್ದ ಹತ್ತಾರು ವ್ಯಕ್ತಿಗಳನ್ನು ಮುನ್ನಲೆಗೆ ತರುವ ಪ್ರಯತ್ನವೇ ಈ ಮಾಲೆ.

ಈ ಗ್ರಂಥ ಮಾಲೆಯಲ್ಲಿ ಅನಾವರಣಗೊಳ್ಳುತ್ತಿರುವ ಸಾಧಕರ ಸಾಧನೆ ಮಾತ್ರ ದೊಡ್ಡದು, ಉಳಿದವರದ್ದು ಕಡಿಮೆ ಎನ್ನುವ ಭಾವನೆ ನಮ್ಮಲ್ಲಿಲ್ಲ ಅಥವಾ ಆಯ್ಕೆಗೆ ಎಂಥದ್ದೋ ಮಾನದಂಡ ಗಳನ್ನು ಇಟ್ಟರೂ ಅದ ಸುಲಭದ್ದೂ ಆಗುವುದಿಲ್ಲ. ಹಾಗಾಗಿ ವಿಭಿನ್ನ ಕ್ಷೇತ್ರಗಳ ಜೊತೆ ಸಾಮಾಜಿಕ ನ್ಯಾಯವೂ ಬೇಕು ಎಂದು ನಿರ್ಧರಿಸಿದೆವು.

ಆದರೂ ಸಂಘಕ್ಕೆ ಮೂವತ್ತು ತುಂಬಿದ ನೆನಪಿಗಾಗಿ ಸ್ಥಾಪನೆಯಾದ ಈ ಮಾಲೆಯಲ್ಲಿ ಆಗ ಇದ್ದ ಉದ್ದೇಶ ಕೇವಲ ಮೂವತ್ತು ಮಂದಿಯನ್ನಷ್ಟೇ ಪರಿಚಯಿಸುವುದಾಗಿತ್ತು. ಅದು ಪರಿಪೂರ್ಣಗೊಳ್ಳುತ್ತಿದ್ದ ಹಾಗೆ ಸಾರ್ವಜನಿಕರ ಪ್ರೋತ್ಸಾಹ ಮತ್ತು ಆಗ್ರಹದಿಂದ ನಾವು ಇನ್ನು ಇಪ್ಪತ್ತರಷ್ಟಾದರೂ ಕೃತಿಗಳನ್ನು ಈ ಮಾಲೆಯಲ್ಲಿ ಹೊರ ತರಬೇಕೆಂದು ಈಗ ಸಂಕಲ್ಪಿಸಿದ್ದೇವೆ.

ಈ ಕೃತಿಯ ಪ್ರಕಟಣೆಗೆ ಕಾರ್ಕಳ ತಾಲೂಕಿನ ಮಾಳ ಗ್ರಾಮದ ಹೊಸ ಅಗಳು ಡೋಂಗ್ರೆ ಕುಟುಂಬದವರು ವಿಶೇಷ ಆಸಕ್ತಿ ವಹಿಸಿ ನೆರವು ನೀಡಿದ್ದಾರೆ. ಅವರ ಈ ಉದಾರತೆಗೆ ಕನ್ನಡ ಸಂಘವು ಋಣಿಯಾಗಿದೆ.

ಈ ಕಂತಿನ ಹತ್ತು ಕೃತಿಗಳದ್ದೂ ಅಲ್ಲದೆ ಮುಂದೆ ಪ್ರಕಟವಾಗುವ ಎಲ್ಲಾ ಕೃತಿಗಳ ಪ್ರಕಟಣೆಗಳ ಸಂಚಾಲಕರು ಹಿರಿಯ ಸಾಹಿತಿ ಶ್ರೀ ವಿ.ಗ. ನಾಯಕ ಅವರು. ಹೊತ್ತಗೆಗಳ ಮಾರಾಟದಲ್ಲಿ ನಮ್ಮ ಜೊತೆ ಕೈಜೋಡಿಸುತ್ತಿರುವವರು ಪುತ್ತೂರಿನ ಕೊಡೆಂಕಿರಿ ಪ್ರಕಾಶನದ ಶ್ರೀ ಪ್ರಕಾಶ ಕೊಡಂಕಿರಿ ಅವರು. ಇದರಿಂದ ಸಂಘದ ಬಹುಭಾರ ಕಡಿಮೆಯಾಗಿದೆ. ಅದಕ್ಕಾಗಿ ಅವರಿಬ್ಬರಿಗೆ ವಿಶೇಷ ಕೃತಜ್ಞತೆಗಳು ಸಲ್ಲಬೇಕಾಗಿವೆ. ಈ ಮಾಲೆಗೆ ಬರೆದ ಲೇಖಕರೆಲ್ಲರೂ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ನೆರವಾಗಿದ್ದಾರೆ. ಅವರಿಂದಾಗಿ ಮಾಲೆಯ ಘನತೆ, ಗೌರವ ಹೆಚ್ಚಿದೆ. ಮಂಗಳೂರಿನ ಆಕೃತಿ ಪ್ರಿಂಟ್ಸ್‌ನ ಶ್ರೀ ಕಲ್ಲೂರು ನಾಗೇಶ ಹಾಗೂ ಅವರ ಬಳಗದ ಸಹಕಾರ ದೊಡ್ಡದು. ಅವರಿಗೆ ಸಂಘವು ಋಣಿಯಾಗಿದೆ.

ಕಾಂತಾವರ
೨೬-೦೯-೨೦೧೦

**ಡಾ. ನಾ. ಮೊಗಸಾಲೆ**
ಪ್ರಧಾನ ಸಂಪಾದಕರು

## ಸ್ತ್ರೀಪರ ಚಿಂತಕಿ

# ಪಂಡಿತ ರಮಾಬಾಯಿ ಸರಸ್ವತಿ

೧೮ನೇ ಶತಮಾನದ ಅಂತ್ಯ ಭಾಗದಲ್ಲಿ ಕೃಷ್ಣ ಅನಂತ ಡೋಂಗ್ರೆ ಎಂಬ ವೇದಾಧ್ಯಯನ ಸಂಪನ್ನನೂ, ಸದಾಚಾರಿಯೂ ಆದ ಚಿತ್ಪಾವನ ಬ್ರಾಹ್ಮಣನು ಮಾಳದ ಹೇರಂಜಿಯಲ್ಲಿ ವಾಸವಾಗಿದ್ದನು. ಇದಕ್ಕಿಂತ ಮೊದಲು ಈ ಪ್ರದೇಶದ ಭೌಗೋಳಿಕ ಇರುವಿಕೆ ಬಗ್ಗೆ ನಿಮಗಿಲ್ಲಿ ತಿಳಿಸಬೇಕಾಗಿದೆ. ಪೋರ್ಚುಗೀಸರ ಕಾಲದಲ್ಲಿಯೇ ಚಿತ್ಪಾವನರು ದಕ್ಷಿಣಕ್ಕೆ ವಲಸೆ ಬಂದರು. ದಕ್ಷಿಣಕನ್ನಡದ (ಈಗಿನ ಉಡುಪಿ ಜಿಲ್ಲೆ) ಪ್ರದೇಶದಲ್ಲಿ ಆದಿವಾಸಿ ಗಿರಿಜನರಿಂದ ತೋಟದ ಸ್ಥಳಗಳನ್ನು ಪಡೆದು ಊರ್ಜಿತ ರೂಪುಗೊಳಿಸಿ ವಸಾಹತು ಏರ್ಪಡಿಸಿದರು. ಉಡುಪಿ ಜಿಲ್ಲೆಯ ಕಾರ್ಕಳದ ಪೂರ್ವಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿ ಪಶ್ಚಿಮಘಟ್ಟಗಳ ಸಾಲು, ಕೋಟೆಯ ಗೋಡೆಯಂತೆ ವಿರಾಜಮಾನವಾಗುತ್ತದೆ. ಈ ಪಶ್ಚಿಮಘಟ್ಟ ಅಥವಾ ವರಾಹ ಪರ್ವತದ ಬುಡಕ್ಕೆ ಇರುವ ಮಾಳ ಗ್ರಾಮಕ್ಕೆ ಸುಮಾರು ೮-೯ ಕಿ.ಮೀ. ದೂರವಿರುವ ತುಂಗಾ-ಭದ್ರಾ ನದಿಗಳ ಉಗಮ ಸ್ಥಾನ ವಾದ ಗಂಗಾಮೂಲವೆಂಬ ಸುಂದರ ಕಾಡಿನ ನಾಡೇ ನಮ್ಮ ರಮಾಬಾಯಿಯ ಜನ್ಮ ಸ್ಥಾನ. ಈ ಗಂಗಾಮೂಲದ ಎಳ್ಳಮಾವಾಸ್ಯೆ ಸ್ನಾನದ ಪಾವಿತ್ರ್ಯ ಇಂದಿಗೂ ನಿತ್ಯನೂತನ. ಮೈಸೂರು ಮಹಾರಾಜರಾದ ಕೃಷ್ಣರಾಜ ಒಡೆಯರು ಇಲ್ಲಿ ಸಂದರ್ಶನವಿತ್ತು, ಸಂತಸಗೊಂಡಿದ್ದರು. ದೇಶ

-ವಿದೇಶದ ಯಾತ್ರಾರ್ಥಿಗಳಿಗೂ ಈ ತಪೋಭೂಮಿ ತಂಪೆರೆಯುವಂತಿದೆ. ಸಮುದ್ರ ಮಟ್ಟದಿಂದ ೪೦೩೭ ಅಡಿ ಎತ್ತರದಲ್ಲಿರುವ ಈ ಗಂಗಾ ಮೂಲದಲ್ಲಿ ಭದ್ರಾ ನದಿಯ ಉಗಮ ಸ್ಥಳಕ್ಕೆ ವರಾಹತೀರ್ಥವೆಂದೂ ತುಂಗಾ ನದಿಯು ಹುಟ್ಟುವ ಸ್ಥಳಕ್ಕೆ ನಾಗತೀರ್ಥವೆಂದೂ ಹೆಸರಿದೆ. ಹಾಗೇ ಪೂರ್ವಾಭಿಮುಖವಾಗಿ ದೂರ ಅಂತರದವರೆಗೆ ಹರಿದು ಶಿವಮೊಗ್ಗದ ಬಳಿಯ 'ಕೂಡಲಿ' ಎಂಬಲ್ಲಿ ಕೂಡಿ -ತುಂಗಭದ್ರಾ ಎಂಬ ನದಿಯಾಗಿ ಎಲ್ಲರ ಬಾಯಲ್ಲೂ ಹರಿಯುತ್ತಾಳೆ.

ಈ ಕೃಷ್ಣ ಶಾಸ್ತ್ರಿಗಳು ಗಂಗಾಮೂಲದ ಬಳಿಯಿರುವ ಮಾಳ ಗ್ರಾಮದಲ್ಲಿ ವಾಸವಾಗಿದ್ದಾಗ, ಅವರಿಗೆ ರಾಮ ಹಾಗೂ ಪರಮೇಶ್ವರ ಎಂಬಿಬ್ಬರು ಗಂಡು ಮಕ್ಕಳು ಜನಿಸಿದ್ದು ಅವರಲ್ಲಿ ರಾಮಾ ಡೋಂಗ್ರೆ ಬಗ್ಗೆ ವಿಶೇಷ ವಿವರಗಳೇನೂ ಲಭ್ಯವಿಲ್ಲ. ಹಾಗೇ ಪರಮೇಶ್ವರ ಡೋಂಗ್ರೆಗೆ ೧೭೯೬ನೇ ಇಸವಿಯಲ್ಲಿ ಅನಂತನೆಂಬ ಪುತ್ರನು ಹುಟ್ಟಿದನು. ನಮ್ಮ ಈಗಿನ ಚರ್ಚೆಯಲ್ಲಿ ಅನಂತ ಡೋಂಗ್ರೆಯವರ ವ್ಯಕ್ತಿತ್ವ ಬಹಳ ಉನ್ನತವಾದುದೆಂದು ತಿಳಿದುಬರುತ್ತದೆ. ಚಿಕ್ಕಂದಿನಿಂದಲೂ ಸೂಕ್ಷ್ಮ ಬುದ್ಧಿ, ಜ್ಞಾಪಕ ಶಕ್ತಿ, ವಿಚಾರಪ್ರಜ್ಞೆ ಮುಂತಾದ ಒಳ್ಳೆ ಗುಣಗಳನ್ನು ಮೈಗೂಡಿಸಿಕೊಂಡೇ ಬೆಳೆದವರು. ಜೊತೆಗೆ ಅಜ್ಜ ಕೃಷ್ಣ ಶಾಸ್ತ್ರಿಗಳ ಒಡನಾಟ, ವಿದ್ಯಾ ಕಲಿಕೆ, ತೋಟದ ಕೆಲಸಗಳಲ್ಲಿ ನೆರವಾಗುವಿಕೆ ಇವೇ ಸಂಸ್ಕಾರಗಳು ಅನಂತ ಶಾಸ್ತ್ರಿಯ ಬಾಲ್ಯದ ಸ್ನೇಹಿತರಾದವು. ಮುಂದೆ ಕೃಷ್ಣ ಶಾಸ್ತ್ರಿಗಳ ನಿಧನಾನಂತರ ಅನಂತ ಡೋಂಗ್ರೆಗೆ ತಮ್ಮ ೧೨ನೇ ವಯಸ್ಸಿನಲ್ಲಿ ಮೊದಲ ವಿವಾಹ ಸೌ. ಯಮುನಾ ಬಾಯಿ ಇವರೊಂದಿಗೆ ನೆರವೇರಿತು.

ವಿವಾಹಾನಂತರ ಶಾಸ್ತ್ರಿ ಡೋಂಗ್ರೆ ಶೃಂಗೇರಿ ಶಂಕರಾಚಾರ್ಯ ಪೀಠದಲ್ಲಿ ವೇದಾಧ್ಯಯನ, ಸಂಸ್ಕೃತಾಭ್ಯಾಸದಲ್ಲಿ ತೊಡಗಿಕೊಂಡರು. ಅಲ್ಲಿ ಸುಮಾರು ಆರು ವರ್ಷಗಳ ಕಾಲ ಅಧ್ಯಯನ ನಡೆಸಿ ತಮ್ಮ ೧೮ನೇ ವಯಸ್ಸಿನಲ್ಲಿ ಮಹಾರಾಷ್ಟ್ರದ ಪುಣೆಯನ್ನು ಸೇರಿದರು. ಆಗ ೨ನೇ ಬಾಜಿರಾಯನು ಪೇಶ್ವೆಯಾಗಿದ್ದ ಕಾಲ. ಬಾಜಿರಾಯನ ರಾಜಪುರೋಹಿತ ರಾಮಚಂದ್ರ ಶಾಸ್ತ್ರಿ ಸಾಠೆ ಎಂಬವರು ಅನಂತ ಶಾಸ್ತ್ರಿಗಳ ಗುರುಗಳಾಗಿದ್ದರು. ಆಗ ವಿಶೇಷವೆಂದರೆ ರಾಜಪುರೋಹಿತರಾದ ರಾಮಚಂದ್ರ ಶಾಸ್ತ್ರಿಗಳು ಪೇಶ್ವೆ ಮನೆತನದ ಸ್ತ್ರೀಯರಿಗೆ ಸಂಸ್ಕೃತ ಸಾಹಿತ್ಯವನ್ನು ಕಲಿಸುವುದ್ಕಾಗಿ ನಿಯಮಿತಗೊಂಡಿದ್ದರು. ಹೀಗೆ ಜತೆಗೇ ಅನಂತ ಶಾಸ್ತ್ರಿಗಳೂ ಪೇಶ್ವೆ ದರ್ಬಾರಿನಲ್ಲಿ ಸಹಜವಾಗಿ ತಮ್ಮ ಬುದ್ಧಿಮತ್ತೆಯಿಂದ ನಿಕಟವರ್ತಿಯಾಗಿದ್ದರು.

ಅನಂತ ಶಾಸ್ತ್ರಿಗಳದು ವೈವಿಧ್ಯಪೂರ್ಣ ಬದುಕೇ ಸರಿ. ಕಾವ್ಯ, ತರ್ಕ, ವ್ಯಾಕರಣಾದಿ ಸಾಹಿತ್ಯ ಭಾಗದಲ್ಲೂ, ಪುರಾಣ ಧರ್ಮಶಾಸ್ತ್ರಗಳಲ್ಲೂ, ಉಪನಿಷತ್ತುಗಳಲ್ಲೂ ಪ್ರವೀಣ ರಾದರು. ತಮ್ಮಲ್ಲೇ ತರ್ಕ ನಡೆಸುತ್ತಾ ನಡೆಸುತ್ತಾ ಭಾರತದ ಸ್ತ್ರೀ ವಿದ್ಯಾಭ್ಯಾಸದ ಪ್ರಾಮುಖ್ಯ ಅರಿತುಕೊಂಡರು. ಹಾಗೇ ಪುರಾಣ ಸದೃಶ ಸ್ತ್ರೀಯರಾದ ಗಾರ್ಗಿ, ಮೈತ್ರೇಯಿ, ಸುಲಭಾ,

ಲೋಪಾಮುದ್ರಾ, ಶಾಕುಂತಲಾ ಮುಂತಾದವರು ದೇವ ಭಾಷೆಯಾದ ಸಂಸ್ಕೃತದಲ್ಲಿ ಉನ್ನತ ವಿದ್ಯಾಭ್ಯಾಸ ನಡೆಸಿ ವೇದ ಋಚೆಗಳನ್ನು ತಯಾರಿಸುವಷ್ಟು ಯೋಗ್ಯತೆ ಪಡೆದಿದ್ದರಲ್ಲವೆ ಅಂದಿತು ಮನಸ್ಸು. ಹಾಗಾದರೆ ತಾನೂ ಸ್ವಗ್ರಾಮಕ್ಕೆ ಹೋಗಿ ತನ್ನ ಮನೆಯ ಸ್ತ್ರೀಯರಿಗೆ ಸಂಸ್ಕೃತವನ್ನು ಕಲಿಸಲೇಬೇಕೆಂಬ ಸಂಕಲ್ಪ ಮನದಲ್ಲಿ ನೆಲೆಯೂರಿತು.

೧೮೧೮ರಲ್ಲಿ ಮತ್ತೆ ಪೇಶ್ವೆಯವರ ಕಾಲದಲ್ಲಿ ವ್ಯತ್ಯಯವಾಗಿ ಬ್ರಿಟಿಷ್ ಸರಕಾರದ ಹಸ್ತಾಲಾಪದಿಂದಾಗಿ ೨ನೇ ಬಾಜಿರಾಯನು ಅಧಿಕಾರ ಕಳೆದುಕೊಳ್ಳಬೇಕಾದ ವಿಲಕ್ಷಣ ಪರಿಸ್ಥಿತಿ ಒದಗಿಬಂತು. ಖಾನ ಕಾನ್ಪುರದ ಬಳಿಯ ಬ್ರಹ್ಮಾವರ್ತಕ್ಕೆ ಅವರನ್ನು ತಮ್ಮ ವಿಶ್ರಾಂತಿ ಜೀವನ ಕಳೆಯುವುದಕ್ಕಾಗಿ ಕಳುಹಿಸಲಾಯಿತು. ಇವರೊಂದಿಗೆ ಅವರ ಪರಿವಾರ ಜನರೂ, ಆಶ್ರಿತರೂ, ರಾಜಗುರುಗಳೂ ಒಡನಾಡಿಗಳಾದರು. ಈ ಸಮಯದಲ್ಲೇ ರಾಮಚಂದ್ರ ಸಾಠೆಯವರು ತನ್ನ ಶಿಷ್ಯನಿಗೆ 'ಶಾಸ್ತ್ರಿ' ಎಂಬ ಬಿರುದು ನೀಡಿ ಗೌರವಿಸಿ ಗ್ರಾಮಕ್ಕೆ ತೆರಳಲು ನಿರೂಪ ಕೊಟ್ಟನು. ಇತ್ತ ಅನಂತ ಶಾಸ್ತ್ರಿಗಳು ತಮ್ಮೂರು ಮಾಳಕ್ಕೆ ಏನೋ ಧ್ಯೇಯದ ಹೊಣೆ ಹೊತ್ತುಕೊಂಡು ಬಂದರು. ಸಾಂಸಾರಿಕವಾಗಿ ಕೊರತೆಯಿಲ್ಲದಿದ್ದರೂ, ತನ್ನ ತಂದೆಗೆ ಬಹಳೇ ಸಾಲವಾಗಿದ್ದುದನ್ನು ಕಂಡು ಚಿಂತಿತರಾದರು. ಇದೇ ಸಮಯದಲ್ಲಿ ಅನಂತ ಶಾಸ್ತ್ರಿಗಳಿಗೆ ಎರಡು ಹೆಣ್ಣು ಹಾಗೂ ಒಂದು ಗಂಡು ಮಕ್ಕಳಿದ್ದರು. ತನ್ನ ತಂದೆಗೊದಗಿದ ಪರಿಸ್ಥಿತಿಯಿಂದ ಬೇಸತ್ತು ಧನಾರ್ಜನೆಗೆ ಮೈಸೂರು ಮಹಾರಾಜರ ಆಸ್ಥಾನ ಸೇರಿದರು. ಮೈಸೂರು ಮಹಾರಾಜರೋ ವಿದ್ವಜ್ಜನರ ಆಶ್ರಯದಾತರೂ, ಪೋಷಕರೂ ಎಂದ ಪ್ರಸಿದ್ಧಿಗೊಂಡವರು. ವಿದ್ವಾಂಸರಿಗೆ ಅಲ್ಲಿ ಅತೀವ ಗೌರವ ಕೊಡಲಾಗುತ್ತಿತ್ತು. ಅನಂತ ಶಾಸ್ತ್ರಿಗಳ ಬಹುಶ್ರುತತ್ವ, ಪಾಂಡಿತ್ಯಗಳಿಗೆ ಮೆಚ್ಚಿದ ಮಹಾರಾಜರು ಅನೇಕ ಧನ, ಕನಕಾದಿಗಳನ್ನು, ೨೫,೦೦೦ ರೂಪಾಯಿಗಳನ್ನು ಸಂಭಾವನೆ ಕೊಟ್ಟು ಗೌರವಿಸಿದರು. ಹೀಗೆ ಮೈಸೂರಿನಲ್ಲಿ ಸುಮಾರು ಹತ್ತು ವರ್ಷಗಳ ಕಾಲ ಅನಂತ ಶಾಸ್ತ್ರಿಗಳು ಆಸ್ಥಾನ ಪಂಡಿತರಾಗಿದ್ದರು. ತರುವಾಯ ಮತ್ತೆ ಸ್ವಗ್ರಾಮವಾದ ಮಾಳಕ್ಕೆ ತೆರಳಿ, ಸಾಲಬಾಧೆಯಿಂದ ಮುಕ್ತರಾಗಿ, ತನ್ನ ಮಕ್ಕಳ ವಿವಾಹಾದಿಗಳನ್ನು ಪೂರೈಸಿ, ತನ್ನ ಮನೆಯವರೊಂದಿಗೆ ಕಾಶೀಯಾತ್ರೆಗೆ ಪ್ರಯಾಣ ಬೆಳೆಸಿದರು. ಆಗಿನ ಮುಂಬೈ ಗವರ್ನರನು ಶಾಸ್ತ್ರಿಗಳನ್ನು ಗೌರವಿಸಿ, ಅವರ ಪ್ರಯಾಣದ ಪರವಾನಗಿ ಪತ್ರವನ್ನೂ ಒಂದು ಪಲ್ಲಕ್ಕಿ, ಎರಡು ಗಾಡಿ ಹಾಗೂ ಹನ್ನೆರಡು ಮಂದಿ ಸಿಪಾಯಿಗಳನ್ನೂ ಕಳುಹಿಸಿದ್ದನು. ಈ ಶಿಫಾರಸು ಪತ್ರದಲ್ಲಿ ಅನಂತ ಶಾಸ್ತ್ರಿಯವರನ್ನು ಯುಕ್ತ ಮರ್ಯಾದೆಗಳಿಂದ ಸ್ವಾಗತಿಸಬೇಕಾಗಿ ದೇಶೀಯ ರಾಜರಿಗೆ ಹಾಗೂ ಸರದಾರರಿಗೆ ಆದೇಶ ಕೊಡಲಾಗಿತ್ತು. ಕಾಶೀ ಯಾತ್ರೆಯ ಸಮಯದಲ್ಲಿ ಅನಂತ ಶಾಸ್ತ್ರಿಗಳ ಪತ್ನಿ ಸೌ। ಯಮುನಾ ಬಾಯಿ ಸ್ವರ್ಗಸ್ಥರಾದರು. ತಾನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕಾಶಿಯಲ್ಲಿ ನಾಲ್ಕು ವರ್ಷಗಳ ಕಾಲ ನೆಲೆಸಿದರು. ಕಾಶಿಯಲ್ಲಿ ಅನಂತ ಶಾಸ್ತ್ರಿಗಳು ಆರು ದರ್ಶನ ಶಾಸ್ತ್ರಗಳಲ್ಲೂ ಪ್ರಾವೀಣ್ಯ ಗಳಿಸಿದರು. ಅದುವರೆಗೆ ಶೈವ ಮತದಲ್ಲಿದ್ದ ಶಾಸ್ತ್ರಿಗಳು ವೈಷ್ಣವ ಮತದ ದೀಕ್ಷೆಯನ್ನು ಸ್ವೀಕರಿಸಿದರು.

ಮುಂದೆ ಕಾಶೀರಾಜನ ಆಸ್ಥಾನದಲ್ಲಿ ಕೆಲ ಕಾಲವಿದ್ದು ಮಥುರಾ, ವೃಂದಾವನ, ಹರಿದ್ವಾರ, ಅಯೋಧ್ಯೆ ಮುಂತಾದ ಕಡೆ ಸಂಚರಿಸಿ ನೇಪಾಳದ ಕಡೆ ಹೊರಟರು. ನೇಪಾಳದಿಂದ ಹಿಂದಿರುಗಿದ ಅನಂತ ಶಾಸ್ತ್ರಿಗಳು ೧೮೪೦ನೇ ಇಸವಿಯಲ್ಲಿ ಪೈಠಣ ಎಂಬ ಊರಿನಲ್ಲಿ ಬಂದು ತಂಗಿದ್ದಾಗ, ದೈವಯೋಗವೋ ಕಾಕತಾಳೀಯವೋ ಕಾಶೀಯಾತ್ರೆಗೆಂದು ಹೊರಟಿದ್ದ ಮಾಧವ ರಾವ್ ಅಭ್ಯಂಕರರೂ ಅಲ್ಲೇ ತಂಗಿದ್ದರು. ತಮ್ಮ ಗರ್ಭಿಣಿ ಹೆಂಡತಿ ಹಾಗೂ ಒಂಬತ್ತು ವರ್ಷ ಪ್ರಾಯದ ಮಗಳನ್ನೂ ಜತೆಗೆ ಕರೆತಂದಿದ್ದರು. ಅನಂತ ಶಾಸ್ತ್ರಿಗಳ ವಿದ್ಯಾ ತೇಜಸ್ಸು ರೂಪ, ಸಂಪತ್ತು, ಗಂಭೀರ ಸ್ವಭಾವ ಇತ್ಯಾದಿ ಗುಣಗಳಿಂದ ಸಹಜವಾಗಿ ಕಂಗೊಳಿಸುತ್ತಿದ್ದ ವ್ಯಕ್ತಿಯ ವ್ಯಕ್ತಿತ್ವಕ್ಕೆ ಅಭ್ಯಂಕರರು ಮಾರುಹೋದರು. ವಿಧುರನೆಂದು ತಿಳಿದರೂ, ವಿದ್ಯಾವಾರಿಧಿಯೊಂದಿಗೆ ತಮ್ಮ ಮಗಳನ್ನು ಧಾರೆ ಎರೆದು ಕೊಟ್ಟೇ ಬಿಟ್ಟರು. ದೈವಯೋಗವೆಂಬಂತೆ ಅನಂತ ಶಾಸ್ತ್ರಿಗಳೂ ಇದಕ್ಕೆ ಒಪ್ಪಿದರು. ಹೀಗೆ ಅನಂತ ಶಾಸ್ತ್ರಿಗಳ ದ್ವಿತೀಯ ವಿವಾಹವು ಸೌ। ಲಕ್ಷ್ಮೀಬಾಯಿಯೊಂದಿಗೆ ನೆರವೇರಿತು.

ವಿವಾಹಾನಂತರ ನವ ವಧುವಿನೊಡನೆ ಸ್ವಗ್ರಾಮ ಮಾಳಕ್ಕೆ ತೆರಳಿದಾಗ ಅನಂತ ಶಾಸ್ತ್ರಿಗಳ ವಯಸ್ಸು ನಲ್ವತ್ತನಾಲ್ಕು ಆಗಿತ್ತು. ಅನಂತ ಶಾಸ್ತ್ರಿಗಳ ವಯೋವೃದ್ಧ ತಾಯಿ ಸೊಸೆಯನ್ನು ಕಂಡು ಆನಂದ ಪಟ್ಟರು. ವಿದ್ಯೆ, ಪ್ರವಾಸಗಳು, ಲೋಕಾನುಭವಗಳು, ಸ್ವತಂತ್ರ ವಾದ ಮನೋಭಾವಗಳು ಇವೆಲ್ಲ ಅನಂತ ಶಾಸ್ತ್ರಿಯವರನ್ನು ಸಂಪ್ರದಾಯ ವಾದದಿಂದ ಹೊರಗುಳಿಸಿದವು. ಭೂತಾರಾಧನೆ, ಮಂತ್ರವಾದ ಮುಂತಾದ ಅಂಧಶ್ರದ್ಧೆ ಗಳನ್ನು ಕಟುವಾಗಿ ಖಂಡಿಸಿದ್ದೇ ಅಲ್ಲದೆ ತಮ್ಮ ಮನೆಯಲ್ಲೂ ಇಂತಹ ಆಚರಣೆಗಳನ್ನು ನಿಷೇಧಿ ಸಿದರು. ಸ್ತ್ರೀಯರನ್ನು ವಿದ್ಯಾವಂತರಾಗಿ ಮಾಡಬೇಕೆನ್ನುವ ಬಯಕೆಯನ್ನು ಕಾರ್ಯರೂಪಕ್ಕೆ ತಂದರು. ಎಂತಹ ಕಾಲದಲ್ಲಿ ಎಂತಹ ಚಲನೆ? ನಮ್ಮ ಮನಸ್ಸು ಹಿಂದೋಡಿದರೆ ತಿಳಿಯುತ್ತದೆ ಆವಾಗಿನ ದಿನಗಳ ಸಂಪ್ರದಾಯಗಳ ಕಟ್ಟುಬದ್ಧತೆ ಹೇಗಿದ್ದಿತೆಂದು. ಅಂಥ ವಾತಾವರಣ ದಲ್ಲಿ ಅನಂತ ಶಾಸ್ತ್ರಿಗಳ ವಾದ ವಿತಂಡ ಎನಿಸಿತು. ''ಸ್ತ್ರೀಯರಿಗೆ ವಿದ್ಯೆ ಅನವಶ್ಯಕ. ಅದರಲ್ಲೂ ದೇವಭಾಷೆಯಾದ ಸಂಸ್ಕೃತಕ್ಕಂತೂ ಸ್ತ್ರೀಯರಿಗೆ ಪ್ರವೇಶವಿಲ್ಲ'' ಎಂಬ ಭಾವನೆಯೇ ಸರ್ವತ್ರ ಪ್ರಚಾರವಿದ್ದ ಆ ಕಾಲದಲ್ಲಿ ಅನಂತ ಶಾಸ್ತ್ರಿಗಳ ವರ್ತನೆ ನೆರೆಹೊರೆಯವರಿಂದಲೂ ಸ್ವಜನ ರಿಂದಲೂ ನಾನಾ ರೀತಿಯ ದೋಷಾರೋಪಗಳಿಗೆ ಕಾರಣವಾಯಿತು. ಹೊರಪ್ರಪಂಚದ ಅರಿವೇ ಇಲ್ಲದ ಮಂದಿ ಈ ತೆರನ ಬದಲಾವಣೆಯನ್ನು ಹೇಗೆ ಸ್ವೀಕರಿಸಿತು? ಸಹಜವಾಗಿ ಅನಂತ ಶಾಸ್ತ್ರಿಗಳನ್ನು ದ್ವೇಷಿಸತೊಡಗಿದರು. ಆಗ ಅನಂತ ''ಶಾಸ್ತ್ರಿಗಳೂ ನಿಷ್ಠುರವಾಗಿ ಕರ್ತವ್ಯ ಅಕರ್ತವ್ಯಗಳ ಅರಿವು ನನಗಿದೆ. ನಾನು ದೇವರಿಗೆ ಹೆದರಿ ನಡೆಯುವವನೇ ಹೊರತು ಸಮಾಜಕ್ಕೆ ಹೆದರುವವನಲ್ಲ. ನನ್ನ ಜತೆಗೆ ಬೇಕೆನಿಸಿದರೆ ವ್ಯವಹಾರ ಇಟ್ಟುಕೊಳ್ಳುವುದು ಬಿಡುವುದು ನಿಮ್ಮಿಚ್ಛೆ'' ಎಂಬುದಾಗಿ ತಿಳಿಸಿ ತನ್ನ ಪತ್ನಿ ಲಕ್ಷ್ಮೀಬಾಯಿಗೆ ಸಂಸ್ಕೃತಾಭ್ಯಾಸ ನೀಡಲಾರಂಭಿಸಿದರು.

ಈ ಎಲ್ಲ ವಿಶೇಷ ವಾರ್ತೆಗಳು ಉಡುಪಿ ಮಧ್ವಾಚಾರ್ಯರ ಪೀಠದವರೆಗೂ ಹಬ್ಬಿತು. ಮಠಾಧಿಕಾರಿಗಳೇ ಸ್ವತಃ ಶಾಸ್ತ್ರಿಯವರನ್ನು ಕರೆಸಿ, ಧರ್ಮ ವಿರುದ್ಧವಾದ ವರ್ತನೆ ಬಗ್ಗೆ ವಿಚಾರಿಸಿದರು. ಆಗ ಅನಂತ ಶಾಸ್ತ್ರಿಗಳು ಅದಕ್ಕೆ ತಕ್ಕುದಾದ ಕಾರಣಗಳನ್ನು ಒದಗಿಸಿದರು. ಆದರೂ ಮಠಾಧಿಕಾರಿಗಳ ಸಮ್ಮುಖದಲ್ಲಿ ವಾದ ಮಂಡಿಸಲು ತರ್ಕ ಸಭೆಯಲ್ಲಿ ಪಾಲ್ಗೊಳ್ಳಬೇಕಾಯಿತು. ಶೀರೂರು ಎಂಬಲ್ಲಿ ಸಭೆಗೆ ಏರ್ಪಾಟಾಯಿತು. ಕರ್ನಾಟಕದ ಮೂಲೆ ಮೂಲೆಗಳಿಂದ ೪೦೦ ಜನ ಪಂಡಿತರು ಈ ಧರ್ಮಸಭೆಯಲ್ಲಿ ಪಾಲ್ಗೊಂಡಿದ್ದರು. ಅನಂತ ಶಾಸ್ತ್ರಿಗಳು ಶೃತಿ, ಸ್ಮೃತಿಗಳಿದಲೂ, ರಾಮಾಯಣ, ಮಹಾಭಾರತ ಗಳಿಂದಲೂ, ಇತಿಹಾಸದಿಂದಲೂ, ಸ್ತ್ರೀಯರಿಗೆ ಸಂಸ್ಕೃತ ವಿದ್ಯೆ ಕಲಿಸಬಹುದಾಗಿ ಇದ್ದ ಆಧಾರಗಳನ್ನೆಲ್ಲ ಮಂಡಿಸಿದರು. ಇವರ ತರ್ಕಬದ್ಧವಾದ ವಾದಗಳಿಂದ ಎಲ್ಲ ಪಂಡಿತರೂ ತಲೆದೂಗುವಂತೆ ಉತ್ತರಿಸಿದ್ದು ದೊಡ್ಡ ಸಾಧನೆಯೇ ಸರಿ. ಪ್ರಶ್ನೋತ್ತರ ರೂಪವಾದ ಆ ದಿನದ ತರ್ಕದ ಲೇಖನಕ್ಕೆ ಮಠದ ಕಡೆಯಿಂದ ವಿದ್ವಾಂಸರು ಸಾಕ್ಷರಿಯನ್ನು ಹಾಕಿದರು. ಮುಂದೆ ಅನೇಕ ವರ್ಷಗಳವರೆಗೆ ಈ ಲೇಖನವನ್ನು ಅನಂತ ಶಾಸ್ತ್ರಿಗಳು ಸಂಗ್ರಹಿಸಿ ಜೋಪಾನವಾಗಿಟ್ಟಿದ್ದರೆಂದು ರಮಾಬಾಯಿ ತನ್ನ ಆತ್ಮಕಥೆಯಲ್ಲಿ ಬರೆದಿದ್ದಾರೆ.

ಮುಂದೆ ಕೆಲದಿನಗಳ ನಂತರ ಮಾತೃಶ್ರೀ ದೈವಾಧೀನರಾದ್ದರಿಂದ, ಆ ನಿಟ್ಟಿನಲ್ಲಿ ತನ್ನ ಕರ್ತವ್ಯವನ್ನೆಲ್ಲ ನಿರ್ವಹಿಸಿದ ಶಾಸ್ತ್ರಿಗಳು ತಮ್ಮ ಹಿರಿಯ ಹೆಂಡತಿಯ ಮಕ್ಕಳಾದ ರಾಮಕೃಷ್ಣ ಶಾಸ್ತ್ರಿ ಹಾಗೂ ರಮಾಬಾಯಿಗೆ ಎಲ್ಲ ತೋಟ – ಜಮೀನು ಹಂಚಿ ಋಣಭಾರದಿಂದ ಮುಕ್ತರಾದರು. ತಾನು ಮಡದಿ ಲಕ್ಷ್ಮೀಬಾಯಿ ಜತೆಗೆ ತುಂಗಾನದಿಯ ಉಗಮವಾದ ಅದೇ ಗಂಗಾಮೂಲಕ್ಕೆ ಏಕಾಂತ ವಾಸಕ್ಕೆ ಹೊರಟರು. ಅಲ್ಲಿ ಊರಿನಿಂದ ಕರೆಯಿಸಿದ ಆಳುಗಳ ಸಹಾಯದಿಂದ ವಾಸಯೋಗ್ಯವಾದ ಮನೆಯನ್ನು ನಿರ್ಮಾಣ ಮಾಡಲಾಯಿತು. ಸೇವಕರಿಗೆ, ಯಾತ್ರಾರ್ಥಿಗಳಿಗೆ ಬೇರೆ ಬೇರೆ ವ್ಯವಸ್ಥೆ ಮಾಡಲಾಯಿತು. ಮುಂದೆ ಇಲ್ಲಿ ಗಂಗಾಮೂಲದಲ್ಲಿ ೧೨೫ ಜಾನುವಾರು, ಏಳೆಂಟು ಕೆಲಸಗಾರರ ಮನೆಗಳು. ಅನೇಕ ವಿದ್ಯಾರ್ಥಿಗಳ ಪರಿವಾರವಿತ್ತು. ಜತೆಗೇ ಲಕ್ಷ್ಮೀಬಾಯಿಯ ವಿದ್ಯಾಭ್ಯಾಸವೂ ಸಾಗಿತ್ತು. ೧೦ – ೧೨ ವರ್ಷಗಳ ಕಾಲದ ಆಶ್ರಮ ವಾಸವು ಲಕ್ಷ್ಮೀಬಾಯಿಗೆ ತರ್ಕ, ಕಾವ್ಯ, ವ್ಯಾಕರಣ, ಮೀಮಾಂಸೆಗಳಲ್ಲಿ ಇತರರಿಗೆ ಬೋಧನೆ ಮಾಡುವಷ್ಟು ಸಾಮರ್ಥ್ಯ ವ್ಯಾಪಿಸಿತ್ತು. ಬಂದವರಿಗೆಲ್ಲ ನಗುಮೊಗದಿಂದ ಆದರಾತಿಥ್ಯ ಮಾಡುತ್ತಲೇ, ಜತೆಗೆ ಆಶ್ರಮದ ಹೂದೋಟದಲ್ಲಿ, ತರಕಾರಿ ತೋಟದಲ್ಲಿ ಪತಿಗೆ ಸಹಕರಿಸುತ್ತಿದ್ದಳು. ದಂಪತಿ ಅಕ್ಷರಶಃ ಅರುಂಧತಿ ವಸಿಷ್ಠರಂತೆ ವಾಸವಾಗಿದ್ದರು.

ಇವರಿಗೆ ಒಟ್ಟು ಆರು ಮಂದಿ ಮಕ್ಕಳು. ಮೂರು ಮಕ್ಕಳು ಬಾಲ್ಯದಲ್ಲೇ ಮೃತ್ಯುವಶರಾದರು. ಉಳಿದವರು ಕೃಷ್ಣಾಬಾಯಿ, ಶ್ರೀನಿವಾಸ ಹಾಗೂ ರಮಾಬ್ಯಾ. ಕೊನೆಯ ಮಗಳಾದ ರಮಾಬಾಯಿ ೧೮೫೮ನೇ ಇಸವಿ ಎಪ್ರಿಲ್ ೨೩ನೇ ತಾರೀಕಿಗೆ ಹುಟ್ಟಿದರು.

ಇಷ್ಟರಲ್ಲಾಗಲೇ ತಮ್ಮಲ್ಲಿದ್ದ ಧನವೆಲ್ಲವೂ ವ್ಯಯವಾಗಿದ್ದರಿಂದ ಶಾಸ್ತ್ರಿಗಳು ಸಂಸಾರ ನಿರ್ವಹಣೆಗೆ ಬೇರೆ ದಾರಿ ಹುಡುಕಲೇಬೇಕಾಯಿತು. ಹಾಗೆ ದೃಢನಿರ್ಧಾರ ಕೈಗೊಂಡ ಅನಂತ ಶಾಸ್ತ್ರಿ ದಂಪತಿ ಆರು ತಿಂಗಳ ಕೂಸು ರಮಾಬಾಯಿಯನ್ನು ತೊಟ್ಟಿಲಲ್ಲಿ ಇಟ್ಟುಕೊಂಡು ಗಂಗಾಮೂಲದಿಂದ ಹೊರಟರು. ಒಂದು ರೀತಿಯಲ್ಲಿ ರಮಾಬಾಯಿ ಪಾಲಿಗೆ ದೇಶ ಪರ್ಯಟನೆ ಈಗಿಂದಲೇ ಆರಂಭವಾಯಿತೆನ್ನಬಹುದು. ಈ ದಂಪತಿ ಮೂವರು ಮಕ್ಕಳೊಂದಿಗೆ ೧೮೬೩ರ ಸುಮಾರಿಗೆ ಕುಮಟ ಮಾರ್ಗವಾಗಿ ಮುಂಬಯಿ ತಲುಪಿದರೆಂದು ಹೇಳಲಾಗುತ್ತಿದೆ.

## ರಮಾಬಾಯಿಯ ಬಾಲ್ಯ

ಗಂಗಾಮೂಲ ತೊರೆದ ಸಂಸಾರ ತೀರ್ಥಯಾತ್ರೆ ಕೈಗೊಂಡಿತು. ಒಂದೊಂದು ಊರಿನಲ್ಲಿ ನಾಲ್ಕಾರು ತಿಂಗಳಿದ್ದು, ಹೆಚ್ಚೆಂದರೆ ಒಂದು ವರ್ಷ ದೇವಸ್ಥಾನವನ್ನೋ ಛತ್ರಗಳನ್ನೋ ಆಶ್ರಯಿಸುತ್ತಿದ್ದರು. ಈ ಅವಧಿಯಲ್ಲಿ ಪುರಾಣ ಪಠಣ, ಉಪನ್ಯಾಸಗಳನ್ನು ನಡೆಸುತ್ತಿದ್ದರು. ಅದರ ಸಂಭಾವನೆಯೇ ಇವರ ಜೀವನಾಧಾರ. ಲಕ್ಷ್ಮೀಬಾಯಿಯು ತನ್ನ ಮೃದು, ಮಧುರ ಶಾರೀರದಿಂದ ರಾಮಾಯಣ, ಭಾಗವತದ ಶ್ಲೋಕಗಳನ್ನು ಓದುತ್ತಿದುದು ಎಲ್ಲರನ್ನೂ ಸೆಳೆಯುವಂತಿತ್ತು. ಹಾಗೇ ಈ ಎಲ್ಲ ಶ್ಲೋಕಗಳಿಗೆ, ವೇದಾಂತಕ್ಕೆ ತನ್ನ ಅಪೂರ್ವ ವಿಶ್ಲೇಷಣಾ ಪೂರ್ವಕ ವ್ಯಾಖ್ಯೆಯಿಂದ ಅನಂತ ಶಾಸ್ತ್ರಿಗಳ ಪ್ರವಚನವೂ ಜನಾಕರ್ಷಕವೆನಿಸಿತು. ರಮಾಬಾಯಿಗೂ ಅತೀ ಚಿಕ್ಕ ವಯೋಮಾನದಲ್ಲೇ ಅಮ್ಮ ಲಕ್ಷ್ಮೀಬಾಯಿ ದೇವತೆಗಳ ಸ್ತೋತ್ರಗಳನ್ನೂ, ಅಮರಕೋಶವನ್ನೂ ಕಲಿಸಲಾರಂಭಿಸಿದಳು. ಹಾಗೇ ಪುರಾಣದ ಆದರ್ಶಗಳಾದ ಧ್ರುವ, ನಚಿಕೇತ ಮುಂತಾದವರ ಕಥೆಗಳನ್ನೂ ಸೀತೆ, ಸಾವಿತ್ರಿ ಮುಂತಾದ ಪುಣ್ಯಶೀಲರ ಚರಿತ್ರೆಗಳನ್ನೂ ಕಥಾರೂಪವಾಗಿ ಕಲಿಸುತ್ತ ಬಂದಳು. ರಮಾಬಾಯಿಯ ಅಗಾಧ ಸ್ಮರಣಶಕ್ತಿ ಗಮನಿಸಿದ ಅಪ್ಪ ಅನಂತ ಶಾಸ್ತ್ರಿಗಳು ಕ್ರಮವಾಗಿ ವ್ಯಾಕರಣ, ಕಾವ್ಯ, ನಾಟಕಾದಿಗಳನ್ನು ಬೋಧಿಸತೊಡಗಿದರು. ರಮಾಬಾಯಿಗೆ ೧೫ರ ಹರೆಯ ತುಂಬುವುದ ರೊಳಗೆ ಸಂಸ್ಕೃತ ಭಾಷೆಯಲ್ಲಿ ಮಾತನಾಡುವ, ಪುರಾಣಾದಿಗಳನ್ನು ಓದಿ ಅರ್ಥ ಮಾಡಿಕೊಳ್ಳುವಷ್ಟು ಸಾಮರ್ಥ್ಯ ಬಂದಿತು. ೧೮೬೪ರಲ್ಲಿ ಅನಂತ ಶಾಸ್ತ್ರಿ ಕುಟುಂಬ ಬೆಂಗಳೂರಿಗೆ ಬಂದು ನೆಲೆಸಿತು. ಆಗ ಕೃಷ್ಣಾಬಾಯಿಗಿನ್ನೂ ೧೪ ವರ್ಷ. ಹುಡುಗ ಶ್ರೀನಿವಾಸನಿಗೆ ೧೨ ವರ್ಷ. ಹಾಗೇ ಪುಟ್ಟ ರಮೆಗೆ ಆರು ವರ್ಷವಾಗಿತ್ತಷ್ಟೆ. ಅನಂತ ಶಾಸ್ತ್ರಿ ಸಮಯ ಸಿಕ್ಕಿದಾಗಲೆಲ್ಲ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ಅಪ್ಪ, ಅಣ್ಣ - ಅಕ್ಕನಿಗೆ ಪಾಠ ಹೇಳಿಕೊಡುವಾಗ ಪುಟ್ಟ ಮಗು ರಮಾಬಾಯಿ ಸಹಜವಾಗಿಯೇ ಜೊತೆಯಿರುತ್ತಿದ್ದಳು. ಸಹಜವಾದ ಕುತೂಹಲದಿಂದ ಎಲ್ಲವನ್ನೂ ಕಿವಿಗೊಟ್ಟು ಆಲಿಸುತ್ತಿದ್ದಳು. ತನಗೇನೂ ಆ ವಯಸ್ಸಿಗೆ ಅದರ ಅರ್ಥ ತಿಳಿಯದಿದ್ದರೂ ತೀವ್ರ ಗ್ರಹಣಶಕ್ತಿಯಿಂದಾಗಿ ಅದನ್ನು

ಜ್ಞಾಪಕದಲ್ಲಿ ಇಟ್ಟುಕೊಳ್ಳುತ್ತಿದ್ದಳು. ಕೆಲವೇ ದಿನಗಳಲ್ಲಿ ಅನಂತ ಶಾಸ್ತ್ರಿಗಳ ಕೀರ್ತಿ ಬೆಂಗಳೂರಲ್ಲೆಲ್ಲಾ ಹರಡಿತು. ಹಿಂದೊಮ್ಮೆ ಉಡುಪಿಯ ಮಠದಲ್ಲಿ ವಾದ ಮಂಡಿಸಿ ವಿಜಯಿಯಾದವರೆಂದೂ, ಸ್ತ್ರೀಯರಿಗೂ ಸಂಸ್ಕೃತ ಬೋಧಿಸುವಲ್ಲಿ ವಿಶೇಷ ಆಸ್ಥೆ ವಹಿಸಿದವರೆಂದೂ ವಿದ್ವಜ್ಜನಲ್ಲಿ ಹಲವರು ಅಭಿಮಾನ ಹೆಚ್ಚಿಸಿಕೊಂಡರು.

ವಾಸುದೇವಾಚಾರ್ಯರ ಘಟನೆಯಿಂದ ರಮಾಬಾಯಿಗೆ ವಿದ್ವಾಂಸರ ನಿಜವಾದ ಯೋಗ್ಯತೆಯನ್ನು ತಿಳಿದುಕೊಳ್ಳುವ ಜ್ಞಾನ ಬಂದಿತೆನ್ನಬಹುದು. ಒಂದೊಮ್ಮೆ ವಾಸುದೇವಾಚಾರ್ಯರೆಂಬವರು ಅನಂತ ಶಾಸ್ತ್ರಿಯವರಲ್ಲಿ ಬಂದು ಬಹಳ ಹೊತ್ತು ವಿಚಾರ ವಿನಿಮಯದಲ್ಲಿ ತೊಡಗಿ, ಅನಂತರ ಅನಂತ ಶಾಸ್ತ್ರಿಯವರಿಗೂ, ಲಕ್ಷ್ಮೀಬಾಯಿಗೂ ನಮಸ್ಕರಿಸಿ ಹೋದರು. ಆ ದಿನ ಚರ್ಚೆಗೆ ಬಿಸಿ ಏರದೆ, ಸೌಮ್ಯವಾಗಿ ಮುಗಿದು ದರಿಂದಲೋ ಜತೆಗೆ ವ್ಯೋಮ ಸಂಹಿತೆಯ ಶ್ಲೋಕವೂ ಮುಕ್ತಾಯದಲ್ಲಿ ಕೇಳದ್ದಕ್ಕೋ ಅಂತೂ ರಮಾಬಾಯಿಗೆ ಆವತ್ತು ಬಂದ ಶಾಸ್ತ್ರಿಗಳು ಹೆಚ್ಚು ತಿಳಿದವರಲ್ಲ ಎಂಬ ಕಲ್ಪನೆಯುಂಟಾಯಿತು. ಸಂದೇಹ ಮುಚ್ಚಿಡುವ ವಯಸ್ಸೂ, ಮನಸ್ಸೂ ಆಗಿರಲಿಲ್ಲ – ರಮಾಬಾಯಿಗೆ. ಅಮ್ಮ ಲಕ್ಷ್ಮೀಬಾಯಿಯಲ್ಲಿ ಬಂದು ಕೇಳೇಬಿಟ್ಟಳು.

ರ : ಅಮ್ಮಾ ಇವತ್ತು ಬಂದವರಾರಮ್ಮ?

ಲ : ವಾಸುದೇವಾಚಾರ್ಯರು ಎಂಬ ಗೃಹಸ್ಥರು. ನಿಮ್ಮ ತಂದೆಯ ಭೇಟಿಗಾಗಿ ಬಂದರಮ್ಮ.

ರ : ಆದರೆ ಅವರು ಹೆಚ್ಚು ತಿಳಿದವರಲ್ಲವೆಂದು ತೋರುತ್ತದೆ.

ಲ : ಇಲ್ಲ ಮಗೂ, ಅವರು ದೊಡ್ಡ ವಿದ್ವಾಂಸರು.

ರ : ಮತ್ತೆ ವ್ಯೋಮ ಸಂಹಿತೆಯ ಶ್ಲೋಕವೇಕೆ ಪಠಿಸಲಿಲ್ಲ?

ಲ : ಅಯ್ಯೋ ಹುಚ್ಚಿ, ಅವರು ತುಂಬ ಓದಿದವರು. ವ್ಯೋಮ ಸಂಹಿತೆಗಿಂತಲೂ ಹೆಚ್ಚು ಶಾಸ್ತ್ರ ಬಲ್ಲವರು. ಅವರೂ ನಿನ್ನ ತಂದೆಯೂ ಏಕಾಭಿಪ್ರಾಯವುಳ್ಳವರು.

ರ : ಹಾಗಾದರೆ ಇದುವರೆಗೆ ಯಾರೂ ನಿಮಗೂ ವಂದಿಸಿ ಹೋಗಿರಲಿಲ್ಲ. ಇವರು ನಿನಗೂ ನಮಸ್ಕರಿಸಿದರಲ್ಲ. ಬಹುಶಃ ಬಹಳ ಓದಿದವರು ಅಲ್ಲವೇನೋ?

ಲ : ಮಗಳೇ, ತುಂಬಿದ ಕೊಡ ಯಾವತ್ತೂ ತುಳುಕುವುದಿಲ್ಲ. ಯಾರು ನಿಜವಾದ ವಿದ್ಯಾವಂತರೋ, ಅವರು ಬಹಳ ನಮ್ರರಿರುತ್ತಾರೆ. ಅಂಥವರು ಸ್ತ್ರೀಯರಿಗೂ ಸಮಾನವಾದ ಮರ್ಯಾದೆ ಕೊಡುತ್ತಾರೆ. ವಾಸುದೇವಾಚಾರ್ಯರಲ್ಲಿ ಒಣ ಅಭಿಮಾನವಿಲ್ಲದ್ದರಿಂದ ಅವರು ನನ್ನನ್ನೂ ನಮಸ್ಕರಿಸಿ ಹೋದರು. ಮನುಷ್ಯರಲ್ಲಿ ಹೀಗೆ ನಮ್ರತೆ ಇರಬೇಕು.

ಹೀಗೆ ತನ್ನ ತಾಯಿಯಿಂದಲೂ ಮಹಿಳೆಯರಿಗೆ ಸಂಬಂಧಿಸಿ ಹೊಸ ಕಣ್ಣು – ಜ್ಞಾನದ ಕಣ್ಣು ಪಡಕೊಂಡದ್ದು ಮಹತ್ತ್ವದ ಘಟನೆಯೇ.

ಬೆಂಗಳೂರಿನಲ್ಲಿಯ ಇನ್ನೊಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಲೇಬೇಕು. ಅನಂತ ಶಾಸ್ತ್ರಿಗಳು ಬಾಡಿಗೆಗಿದ್ದ ಮನೆಯೊಡೆಯನ ಒಬ್ಬ ಮಗಳು ತವರಿಗೆ ಬಂದಿದ್ದಳು. ಅವಳ ಮಗಳು ತಿಪ್ಪಿ ಹಾಗೂ ರಮಾಬಾಯಿ ಸಮವಯಸ್ಕರು. ತಿಪ್ಪಿ ಯಾವಾಗಲೂ ಹೆಚ್ಚು ಚಿನ್ನಾಭರಣಗಳನ್ನು ಧರಿಸುತ್ತಿದ್ದಳು. ಒಂದು ದಿನ ತಮಾಷೆಗಾಗಿ ತಿಪ್ಪಿಯ ತಾಯಿಯು ಮೈಮೇಲಿನ ಆಭರಣಗಳನ್ನು ಪುಟ್ಟ ರಮಾಬಾಯಿಗೆ ತೊಡಿಸಿದಳು. ರಮಾಬಾಯಿ ಸಹಜ -ಸಂತಸದಿಂದ ಕುಣಿಯುತ್ತ ಈ ಆಭರಣಗಳನ್ನು ತಾಯಿಯಾದ ಲಕ್ಷ್ಮೀಬಾಯಿಗೆ ತೋರಿಸಿದಳು. ಆಗ ಲಕ್ಷ್ಮೀಬಾಯಿಯು ಮಗಳನ್ನು ಹತ್ತಿರಕ್ಕೆ ಕರೆದು, ಬೆನ್ನು ಸವರುತ್ತ, ಮಗೂ ನಿನ್ನಲ್ಲಿ ಚಿನ್ನದಂತಹ ಗುಣಗಳಿದ್ದರೆ ಈ ಎಲ್ಲ ನಗಗಳಿಗಿಂತ ಹೆಚ್ಚಿನ ಶೋಭೆ ಅದೇ ಆಗಿರುತ್ತದೆ ಎಂದಳು. ರಮಾಬಾಯಿಯು ತಾಯಿಯ ಮಾತನ್ನು ಎಂದಿಗೂ ಮರೆಯಲಿಲ್ಲ. ತನ್ನ ಜೀವನ ಪರ್ಯಂತ ರಮಾಬಾಯಿಯು ಆಭರಣಗಳನ್ನು ತೊಟ್ಟುಕೊಳ್ಳಲಿಲ್ಲ ತನ್ನ ಮದುವೆ ಸಂದರ್ಭದಲ್ಲಿ ತನ್ನ ಗಂಡ ಕೊಟ್ಟ ಒಂದು ಉಂಗುರವನ್ನು ಮಾತ್ರ ಜೋಪಾನವಾಗಿಟ್ಟುಕೊಂಡಿದ್ದರು.

ವರುಷಾನಂತರ ಬೆಂಗಳೂರು ತೊರೆದು ದ್ವಾರಕೆಯ ಕಡೆ ಹೊರಟಿತು ಅನಂತ ಶಾಸ್ತ್ರಿಗಳ ಸಂಸಾರ. ಈ ಎಲ್ಲಾ ಯಾತ್ರೆಗಳಲ್ಲಿ, ತಿರುಗಾಟದಲ್ಲಿ ಕೆಲವು ಸಾಮಾಜಿಕ ವಿದ್ಯಮಾನಗಳು ಬಾಲಕಿ ರಮಾಳಲ್ಲಿ ಗೊಂದಲವನ್ನೂ ವಿಚಾರಪರತೆಯನ್ನೂ ಉಂಟು ಮಾಡಿದವು. ಮಕ್ಕಳಾಗಲಿಲ್ಲವೆಂದು ಬಹುಪತ್ನಿತ್ವ, ಗಂಡುಮಕ್ಕಳಾದರಷ್ಟೇ ಮನೆಯಲ್ಲಿ ಸೊಸೆಗೆ ಮಹತ್ವ, ಸಣ್ಣ ವಯಸ್ಸಿನ ಮದುವೆಗಳು - ಅದರಿಂದಾಗುವ ಸಂಸಾರ ಸಂಕಷ್ಟಗಳು, ಸ್ತ್ರೀಯರ ಬಾಳಿನ ದುರಂತದಂತೆ ಕಂಡವು. ಹಾಗೇ ಸಾಮಾಜಿಕ ಚಲನೆಯ ಕೂಗಿನ ಎಳೆಯೊಂದು ರಮಾಬಾಯಿಯಲ್ಲಿ ಸಂಚಾರಗೊಂಡಿತು.

ಹಾಗೇ ೧೮೭೩-೭೪ರಲ್ಲಿ ಮದರಾಸು ಪ್ರಾಂತ್ಯದ ತಿರುಪತಿಗೆ ಬಂದಾಗ ಅನಂತ ಶಾಸ್ತ್ರಿಗಳಿಗೆ ಅವರ ವಯಸ್ಸಿಗೂ, ಅವರ ಎಡೆಬಿಡದ ಪ್ರವಾಸಗಳಿಗೂ ತಾಳ-ಮೇಳವಿಲ್ಲ ದಂತಾಯಿತು. ಪುರಾಣ ಪ್ರವಚನಗಳಿಂದ ಸಂಸಾರ ನಿರ್ವಹಣೆ ಕಷ್ಟವಾಯಿತು. ಭಿಕ್ಷೆ ಬೇಡುವಿಕೆ, ಬೇರೆಯವರ ಅಡಿಯಾಳಾಗಿ ಜೀವನ ಇವೆಲ್ಲ ಅವರ ಜಾಯಮಾನಕ್ಕೆ ಒಪ್ಪದ ಮಾತು. ತನ್ನಲ್ಲಿದ್ದ ಧನದಲ್ಲಿ ಬಹುಪಾಲನ್ನು ಅನೇಕರಿಗೆ ಹಂಚಿಯಾಗಿತ್ತು. ಉಳಿದುದು ಕಳ್ಳರಿಂದ ಅಪಹೃತವಾಯಿತು ಹಾಗೂ ತಮ್ಮಲ್ಲಿದ್ದ ಸ್ಥಿರ, ಚರ ಸೊತ್ತು ವಿಕ್ರಯಿಸಿ ಕೆಲವು ಕಾಲ ಕಳೆದರು.

ಮದರಾಸಿನಲ್ಲಿ ಈ ದಿನಗಳಲ್ಲಿ ಭೀಕರ ಕ್ಷಾಮವೊದಗಿತು. ಈ ಕ್ಷಾಮದಲ್ಲಿ ಸಾವಿರಾರು ಜನ ಅನ್ನ ನೀರಿಲ್ಲದೆ ಮರಣಿಸಿದರು. ಇದುವರೆಗೆ ಗೌರವಯುತವಾಗಿ ಜೀವನ ಸಾಗಿಸಿ ಇನ್ನು ಈ ಊರಿನಲ್ಲಿ ಉಪವಾಸ ಬಿದ್ದು ಸಾಯುವುದಕ್ಕಿಂತ ಕಾಡಿಗೆ

ಹೋಗಿಯಾದರೂ ಅನ್ನಾಹಾರವಿಲ್ಲದೆ ಸಾಯುವುದೇ ಮೇಲೆಂದು ನಿಶ್ಚಯಿಸಿದರು. ಹಾಗೇ ಸಮೀಪದ ಕಾಡಿಗೆ ತೆರಳಿ ಅಲ್ಲಿ ಕಾಡಿನ ಹಣ್ಣು ಗಡ್ಡೆಗಳನ್ನು ಬೀಜ - ಸಿಪ್ಪೆ ಸಹಿತವಾಗಿ ನುಂಗಿ ಹನ್ನೊಂದು ದಿನ ಕಳೆದರು. ಆದರೆ ಶ್ರೀನಿವಾಸನಿಗೆ ಇದರಿಂದ ಬೇಸರವಾಯಿತು. ಊರಿಗೆ ಹೋಗಿ ಹೇಗಾದರೂ ಕೂಲಿ ಕೆಲಸ ಮಾಡಿಯಾದರೂ ತಂದೆ ತಾಯಿಗಳನ್ನು ನೋಡಿಕೊಳ್ಳುತ್ತೇನೆಂದು ಪರಿಪರಿಯಾಗಿ ಹೇಳಿದ ಮೇಲೆ ಕಷ್ಟದಿಂದ ಎಲ್ಲರೂ ಅರಣ್ಯದಿಂದ ಹೊರಗಾಗಿ, ಅಲ್ಲಿದ್ದ ದೇವಾಲಯವನ್ನು ಆಶ್ರಯಿಸಿದರು. ಈ ಸ್ಥಿತಿಯಲ್ಲಿ ಅನಂತ ಶಾಸ್ತ್ರಿಗಳು ಆತುರದಿಂದ ಸಂನ್ಯಾಸವನ್ನು ಸ್ವೀಕರಿಸಲು ಸಿದ್ಧರಾದರು. ದೈಹಿಕ ಬೇನೆ ದಿನೇ ದಿನೇ ವೃದ್ಧಿಗೊಂಡಂತೆ ಅವಸಾನ ಕಾಲ ಹತ್ತಿರವಾಯಿತೆಂದು ಸೂಚನೆ ಬಂತೇನೋ. ಕೊನೆಗಾಲ ದಲ್ಲಿ ಅವರು ಇಚ್ಛಿಸಿದ ಸಕ್ರೆ-ನೀರನ್ನೊದಗಿಸಲೂ, ಅಸಹಾಯಕರಾದ ಮಕ್ಕಳಿಗೆ ಸಾಧ್ಯವಾಗಲಿಲ್ಲ. ಆ ಕ್ಷಣವೇ ಪ್ರಾಣಪಕ್ಷಿ ಹಾರಿಹೋಯಿತು. ಆ ಊರಿನ ಯಾರೂ ಶವ ಸಂಸ್ಕಾರಕ್ಕೆ ಸಹಕರಿಸಲಿಲ್ಲ. ದಯಾಳುವಾದ ಒಬ್ಬನೇ ಒಬ್ಬ ಬ್ರಾಹ್ಮಣನ ಸಹಾಯದಿಂದ ಈ ಚಿಕ್ಕ ಮಕ್ಕಳೇ ಒಂದು ಧೋತರದಲ್ಲಿ ಶವವನ್ನು ಕಟ್ಟಿ ಹೇಗೋ ಹೊತ್ತುಕೊಂಡು ಹೋಗಿ ಶವಸಂಸ್ಕಾರ ಮಾಡಿದರು.

ಅನಂತರ ತೀವ್ರ ಉಪವಾಸ - ಬಳಲಿಕೆಯಿಂದ ಕಂಗೆಟ್ಟ ಈ ಕುಟುಂಬ ರಾಯಚೂರಿನವರೆಗೆ ಬಂದಿತ್ತು. ಈಗ ಲಕ್ಷ್ಮೀಬಾಯಿ ನಿತ್ರಾಣಳಾಗುತ್ತಾ ಬಂದು ತಾನಿನ್ನು ಬದುಕುವುದಿಲ್ಲ ಎಂದು ಮಕ್ಕಳಲ್ಲಿ ಹೇಳಿದಳು. ಗಟ್ಟಿಮುಟ್ಟಾದ ಶ್ರೀನಿವಾಸನೂ ನಿಶ್ಶಕ್ತನಾದನು. ಲಕ್ಷ್ಮೀಬಾಯಿಯನ್ನೂ ಕಳಕೊಂಡ ಮೂವರು ಮಕ್ಕಳು ಅನಾಥರಾದರು. ಅಲೆದಾಟದ ಬದುಕೇ ಜೀವನವಾಗಬೇಕಾಯಿತು. ಕಾಶ್ಮೀರದಿಂದ ಪೂರ್ವಕ್ಕೆ ಕಲ್ಕತ್ತಾದವರೆಗೆ ಪ್ರಯಾಣ ಸಾಗಿತು. ಏನಾದರೂ ಉದ್ಯೋಗ ಸಿಕ್ಕಾಗ ಅರೆಹೊಟ್ಟೆ, ಇಲ್ಲದಿದ್ದರೆ ಉಪವಾಸ ದಿಂದ ಕಳೆಯುತ್ತಿದ್ದರು. ಈ ಅಲೆದಾಟದ ಬದುಕಂತೂ ಬಹಳವೇ ರೋಚಕ ಹಾಗೂ ಸವಾಲಾದಂತಿತ್ತು. ರಾತ್ರಿ ವೇಳೆ ರಸ್ತೆ ಬದಿಯಲ್ಲೋ ಅಥವಾ ಸೇತುವೆಗಳ ಕಮಾನಿನ ಅಡಿಯಲ್ಲೋ ಮಲಗುತ್ತಿದ್ದರು. ಮೈ ತುಂಬ ಬಟ್ಟೆಗಳೂ ಇರದ ಸ್ಥಿತಿ. ಪಂಜಾಬದ ಜೇಲಮ್ ನದಿ ತೀರದಲ್ಲಿ ಭಯಂಕರ ಥಂಡಿ ಹೊತ್ತಿಗೆ ಕುತ್ತಿಗೆವರೆಗಿನ ಮರಳಿನಲ್ಲಿ ನಿಂತು ಶೀತಬಾಧೆ ನಿವಾರಿಸಿಕೊಳ್ಳುತ್ತಿದ್ದರು. ಆದರೆ ಇದರಿಂದುಂಟಾದ ಕಿವುಡುತನ ರಮಾಬಾಯಿಗೆ ಶಾಶ್ವತವಾಗಿ ಉಳಿಯುವಂತಾಯಿತು. ಸ್ವಲ್ಪ ಕಾಲದಲ್ಲಿ ಕೃಷ್ಣಾಬಾಯಿಯು ಸ್ವರ್ಗಸ್ಥ ಳಾದಳು. ಆರು ತಿಂಗಳ ಅವಧಿಯೊಳಗೇ ತಂದೆ-ತಾಯಿ-ಅಕ್ಕ ಈ ಮೂವರನ್ನೂ ಕಳೆದುಕೊಂಡು ಶ್ರೀನಿವಾಸ ಹಾಗೂ ತಂಗಿ ರಮಾಬಾಯಿ ದಿಕ್ಕಾಪಾಲಾದಂತಾದರು.

ರಮಾಬಾಯಿಗೆ ಈಗ ತನ್ನ ಗುರಿ ಎಲ್ಲೋ ಕಂಡಂತಾಗಿತ್ತು. ಅಲೆಮಾರು ಬದುಕು ಅನಿವಾರ್ಯವಾಗಿತ್ತಾದರೂ ಹಿಂದಿರುಗಿ ಹೋಗುವ ಹೇಡಿತನ ಬೇಡವಾಗಿತ್ತು. ತಮ್ಮ ವಿಚಾರಗಳು, ಪಾಂಡಿತ್ಯವೇ ತಮ್ಮ ದೊಡ್ಡ ಆಸ್ತಿಯಂತಿದ್ದವು. ಇದರ ಕಲ್ಪನೆ ಎಷ್ಟರಮಟ್ಟಿಗೆ

ಇತ್ತೋ? ಆದರೆ ಅದರಿಂದಾಗಿಯೇ ಹರಿವ ಪ್ರವಾಹದಲ್ಲಿ ದಿಕ್ಕೆಡದಂತೆ ಮನಃಸ್ಥೈರ್ಯ ಇಂಬು ಕೊಟ್ಟಿತು.

## ಕಲಕತ್ತೆಯ ದಿನಗಳು

ದೇಶಾಟನೆ ಮಾಡುತ್ತ ೧೮೭೮ರಲ್ಲಿ ಇವರಿಬ್ಬರೂ ಕಲ್ಕತ್ತಾ ಸೇರಿದರು. ಆಗಲೇ ಇದು ವಿದ್ಯಾಕೇಂದ್ರವೆನಿಸಿತ್ತು. ಅಲ್ಲದೆ ಎಲ್ಲ ಸಾಮಾಜಿಕ, ರಾಜಕೀಯ ಚಳವಳಿಗಳ ಸ್ಫೂರ್ತಿ ಸ್ಥಾನದಂತಿತ್ತು. ರಾಜಾರಾಮ ಮೋಹನರಾಯರ ಕರ್ಮಭೂಮಿ ಇದಾಗಿತ್ತು. ಸತಿ ಸಹಗಮನ ನಿಷೇಧವು ಇಲ್ಲಿಂದಲೇ ಆರಂಭವಾಗಿತ್ತು. ಸ್ತ್ರೀ ಸ್ವಾತಂತ್ರ್ಯವನ್ನು ಬೆಂಬಲಿಸುವ ಮುಂದಾಳುಗಳು ಅಲ್ಲಿಯೇ ಬೆಳಕಿಗೆ ಬಂದರು. ಇಲ್ಲಿ ಆಶ್ಚರ್ಯವೆಂದರೆ ಪ್ರಾಚೀನ ಸಂಪ್ರದಾಯ - ಧರ್ಮಶಾಸ್ತ್ರವನ್ನು ಯಥಾವತ್ ಆಚರಿಸುವ ಕಟು ಸನಾತನಿಗಳೂ ಹಾಗೇ ಈಗಿನ ಕಾಲಾನುಕ್ರಮಕ್ಕನುಗುಣವಾಗಿ ಪ್ರಾಚೀನ ಧರ್ಮಾಚರಣೆಗಳನ್ನು ಬದಲಾವಣೆ ಮಾಡಿ ಒಳ್ಳೆಯ ಅಂಶಗಳನ್ನೇ ಬೆಂಬಲಿಸುವ ಸುಧಾರಕ ವಿದ್ವಾಂಸರೂ ಅಲ್ಲಿದ್ದರು. ಇದರಲ್ಲಿ ಪ್ರಮುಖರೆನಿಸಿದ ರಾಜಾರಾಮ ಮೋಹನರಾಯರು, ಕೇಶವಚಂದ್ರ ಸೇನ, ಕಾಲೀಚರಣ ಬ್ಯಾನರ್ಜಿ, ಪಂಡಿತ ಮಹೇಶಚಂದ್ರ ನ್ಯಾಯರತ್ನ ಇವರೆಲ್ಲರೂ ಸುಧಾರಣಾಪ್ರಿಯ ರಾಗಿದ್ದರು. ಇವರೆಲ್ಲರ ಪ್ರಯತ್ನವೇ ಬ್ರಹ್ಮಸಮಾಜ. ಹಾಗೇ ಹಿಂದೂ ಧರ್ಮದಲ್ಲಿ ನವಚೈತನ್ಯ ತುಂಬುವುದೇ ಇದರ ಉದ್ದೇಶ.

ಇಲ್ಲಿ ರಮಾಬಾಯಿ, ಶ್ರೀನಿವಾಸ ಪದಾರ್ಪಣೆ ಮಾಡಿದಾಗ ಇವರ ವರ್ಚಸ್ಸಿನಿಂದಲೇ ಇವರ ನಿಜವಾದ ಯೋಗ್ಯತೆಯನ್ನು ಅಲ್ಲಿಯ ಜನ ಅರಿತುಕೊಳ್ಳು ವಂತಾಯಿತು. ಅನೇಕ ಕಷ್ಟಗಳಲ್ಲಿ ಬೆಂಡಾಗಿದ್ದರೂ ಜ್ಞಾನದ ಆಳ, ನೀತಿಯುತ ಬದುಕು, ಸಂಸ್ಕಾರ-ಸಂಸ್ಕೃತಿಯುಳ್ಳ ಸ್ವಭಾವದಿಂದ ಜನಮನ್ನಣೆ ಗಳಿಸಲು ಬಹಳ ದಿನ ಬೇಕಾಗಲಿಲ್ಲ. ಕೆಂಡವು ಬೂದಿಯಿಂದಾವರಿಸಲ್ಪಟ್ಟಿದ್ದರೂ ಸ್ವಲ್ಪವೇ ಗಾಳಿ ಸಿಕ್ಕರೂ ಎಲ್ಲೇ ಇದ್ದರೂ ಹೇಗೆ ನಿಗಿಗೊಳ್ಳುತ್ತೋ ಹಾಗಾಯಿತು ಇವರ ಪ್ರತಿಭೆ. ಕಲ್ಕತ್ತಾದಲ್ಲಿ ಕೆಲವೆಡೆ ರಮಾಬಾಯಿ ಪ್ರವಚನಗಳನ್ನು ನಡೆಸಿದಳು. ತನ್ನ ಓಜಸ್ಸಿನ ಕಂಠದಿಂದ, ವಿಷಯ ಪ್ರಬುದ್ಧತೆಯಿಂದ ಭಾಗವತಾದಿ ಪುರಾಣಗಳನ್ನು ಹೇಳುತ್ತ ಹೋದಂತೆ ಅಣ್ಣ ಶ್ರೀನಿವಾಸ ಇದನ್ನು ಅಷ್ಟೇ ಸಮರ್ಥವಾಗಿ ಭಾಷಾಂತರಿಸುತ್ತಿದ್ದ. ಭಾಗವತದ ೧೮,೦೦೦ ಶ್ಲೋಕಗಳು ರಮಾಬಾಯಿಗೆ ಬಾಯಿಪಾಠವಾಗಿದ್ದವು. ವ್ಯಾಕರಣ ಗ್ರಂಥವಾದ ಸಿದ್ಧಾಂತ ಕೌಮುದಿಯಲ್ಲಿ ಯಾವ ವೈಯ್ಯಾಕರಣಿಯನ್ನೂ ಚಕಿತಗೊಳಿಸುವಂತಹ ಪ್ರವೀಣತೆ ರಮಾಬಾಯಿಯಲ್ಲಿತ್ತು. ಇವರ ಅಸಾಧ್ಯ ಪಾಂಡಿತ್ಯ ಕಂಡ ಕಲ್ಕತ್ತೆಯ ಜನರು, ಸಂಸ್ಕೃತ ಪಂಡಿತರು ಅಚ್ಚರಿಗೊಂಡರು. ಕೆಲವೇ ದಿನಗಳಲ್ಲಿ ಕಲ್ಕತ್ತಾ ನಗರದ ವಿಶ್ವವಿದ್ಯಾನಿಲಯದ ಸಭಾಭವನದಲ್ಲಿ ದೊಡ್ಡದೊಂದು ಸಭೆ ಕರೆಸಿ, ಇಲ್ಲಿಯ ಪ್ರಾಜ್ಞರು ರಮಾಬಾಯಿಯನ್ನು ಬರಮಾಡಿಕೊಂಡರು. ಇಲ್ಲಿ

ಮಹೇಶಚಂದ್ರ ನ್ಯಾಯರತ್ನ, ಆಂಗ್ಲ ಪ್ರಾಧ್ಯಾಪಕರು ಮುಂತಾದವರು ಪ್ರಮುಖರಾಗಿದ್ದರು. ರಮಾಬಾಯಿಯನ್ನು ಸ್ವಾಗತಿಸಿ ಸಂಸ್ಕೃತದಲ್ಲಿ ಒಂದು ಬಹುಮಾನ ಪತ್ರವನ್ನು ಸಲ್ಲಿಸಿದರು. ಇದರ ಮೊದಲ ಶ್ಲೋಕ ಹೀಗಿತ್ತು :

ययाभवत्याजकिताः पण्डिता ईद्दशावयम् ।
नतो मन्यामहे । साक्षात् वर्ततेत्र सरस्वती ।।

ಭಾವಾರ್ಥ : ಯಾವ ತನ್ನ ಪಾಂಡಿತ್ಯದಿಂದ ದೊಡ್ಡ ದೊಡ್ಡ ಪಂಡಿತರನ್ನು ನೀವು ಚಕಿತಗೊಳಿಸಿದ್ದೀರೋ ಅಂಥ ಮಹಿಮೆಯುಳ್ಳ ನೀವು ಸಾಧಾರಣ ಮನುಷ್ಯ ವರ್ಗಕ್ಕೆ ಸೇರಿದವರೆಂದು ನಾವು ಭಾವಿಸುವುದಿಲ್ಲ. ಸರಸ್ವತಿ ದೇವಿಯೇ ಸಾಕ್ಷಾತ್ ನಮ್ಮ ಮುಂದೆ ಬಂದು ನಿಂತಿರುವಳೆಂದು ನಾವು ಭಾವಿಸುತ್ತೇವೆ.

ಇದಕ್ಕೆ ಪ್ರತ್ಯುತ್ತರವಾಗಿ ತಕ್ಷಣ ಶ್ಲೋಕ ರಚಿಸಿ ರಮಾಬಾಯಿ ಉತ್ತರಿಸಿದಳು.

।। भवष्भिर्यानि पुष्णाणि । प्रक्षिप्तानि ममोपहरि ।।
।। अहम् नतत् पात्रभूता । न तथैवासि न पण्डिता ।।
।। पर्वताकार सद्वशा भवदभिर्मेगुणाः स्मृताः ।।
।। परमाणु समास्तेशुः । किं त्वेतत् गुणगौरवम् ।।
।। नाहम् सरस्वती साक्षात् मन्यद्वेमां न शारदां ।।
।। किं तु तस्याः सभामध्ये एकाहम् परिचारिक ।।

**ಭಾವಾರ್ಥ** : ಮಹನೀಯರೇ, ನೀವು ಅಪ್ಪಣೆ ಕೊಡಿಸಿದ ಸ್ತುತಿ ಸ್ತೋತ್ರಗಳಿಗೆ ನಾನು ಅಪಾತ್ರಳು. ಇಷ್ಟು ಮಾತ್ರ ಹೇಳಬಲ್ಲೆ. ಸರಸ್ವತಿ ದೇವಿಯ ಭವ್ಯ ಆಸ್ಥಾನದಲ್ಲಿ ನಾನೊಬ್ಬಳು ಬಡ ಸೇವಕಿ. ಈ ಸ್ತುತಿಯು ನಿಮ್ಮ ಒಳ್ಳೆಯತನಕ್ಕೆ ಸಾಕ್ಷಿ. ತಮ್ಮಂತಹ ವಿದ್ವಾಂಸರು ಉಚ್ಚರಿಸಿದ ಮಾತುಗಳಿಂದ ತಮ್ಮಂತಹವರು ಇರುವ ನಗರಕ್ಕೆ ಬಂದ ನಾನು ಧನ್ಯಳು.

ಹೀಗೆ ಈ ಸಭೆಯಲ್ಲಿ ಇನ್ನೂ ಅನೇಕ ಕವಿತೆಗಳನ್ನು ರಚಿಸಿ ರಮಾಬಾಯಿಯು ನಿಂತಲ್ಲೇ ಹಾಡಿ ತೋರಿಸಿದಳು. ಅಲ್ಲಿ ಸೇರಿದ ವಿದ್ವಾಂಸರೆಲ್ಲರು ರಮಾಬಾಯಿಯ ಶೀಘ್ರ ಕವಿತಾ ಶಕ್ತಿಯನ್ನು ಮೆಚ್ಚಿ 'ಪಂಡಿತಾ ಸರಸ್ವತಿ' ಎಂಬ ಬಿರುದನ್ನಿತ್ತು ಗೌರವಿಸಿದರು. ಅಂದಿನಿಂದ ಪಂಡಿತಾ ರಮಾಬಾಯಿ ಸರಸ್ವತಿ ಎಂಬ ಬಿರುದು ಸರ್ವತ್ರ ಪ್ರಚಾರಕ್ಕೆ ಬಂತು.

ರಮಾಬಾಯಿಯ ಕಲ್ಕತ್ತಾದಲ್ಲಿನ ಉಪನ್ಯಾಸ – ವ್ಯಾಖ್ಯಾನಗಳ ಸರಣಿಗೆ ಸ್ತ್ರೀಯರೂ ಬರುತ್ತಿದ್ದರು. ಪ್ರಾಚೀನ ಕಾಲದ ಸ್ತ್ರೀಯರ ಸ್ಥಾನವನ್ನೂ ಸಮಕಾಲೀನ ಸ್ಥಿತಿಯನ್ನೂ ಹೋಲಿಸಿ ಸ್ತ್ರೀಯರ ಸರ್ವತೋಮುಖ ಸುಧಾರಣೆಯನ್ನು ಪ್ರತಿಪಾದಿಸಿದಳು. ಇಲ್ಲಿ ಆನಂದಮೋಹನ

ಬೋಸರು ಕರೆದ ಮಹಿಳಾ ಸಭೆ ಕಲ್ಕತ್ತಾದ ಮೊದಲ ಮಹಿಳಾ ಸಮಾವೇಶವೆನಿಸಿತು. ಅಲ್ಲಿ ಮಹಿಳೆಯರು ಪಂಡಿತ ರಮಾಬಾಯಿಗೆ ವಂಗ ಭಾಷೆಯಲ್ಲಿ ಮಾನಪತ್ರ ಸಲ್ಲಿಸಿದರು. ಈ ಮಾನಪತ್ರದಲ್ಲಿ ಪ್ರಾಚೀನ ಮಹಿಳೆಯರ ಎಲ್ಲ ಆದರ್ಶಗಳನ್ನೂ ಒಡಗೂಡಿಸಿಕೊಂಡಿರುವ ರಮಾಬಾಯಿ ಬಗ್ಗೆ ಗೌರವವಿತ್ತು. ಭಾರತೀಯ ಸಂಸ್ಕೃತಿಯ ಸಿರಿವಂತಿಕೆಗೆ, ಉಚ್ಚ ಶಿಕ್ಷಣಕ್ಕೆ ಮಾದರಿಯಾದ ರಮಾಬಾಯಿಯ ಕುರಿತು ಸಂತೋಷವಿತ್ತು. ಒಬ್ಬ ಪಂಡಿತರು ಇದರ ಭಾಷಾಂತರವನ್ನು ರಮಾಬಾಯಿಗೆ ಸಂಸ್ಕೃತದಲ್ಲಿ ತಿಳಿಸಿದರು. ಆ ಕ್ಷಣವೇ ರಮಾಬಾಯಿ ಸಂಸ್ಕೃತದಲ್ಲಿಯೇ ಅದಕ್ಕುತ್ತರಿಸಿದಳು. ಈಗ ರಮಾಬಾಯಿಯ ಕೀರ್ತಿ ದೇಶಾದ್ಯಂತ ಹಬ್ಬಿತು. ಅನೇಕ ಪತ್ರಿಕೆಗಳು ರಮಾಬಾಯಿಯನ್ನು ಕೊಂಡಾಡಿದವು. ಕಲ್ಕತ್ತದಲ್ಲಿ ಕೇಶವಚಂದ್ರ ಸೇನರು, ಕಾಲೀಚರಣ ಬ್ಯಾನರ್ಜಿಯವರು ತಮ್ಮ ಮನೆಗೆ ರಮಾಬಾಯಿ ಯವರನ್ನು ಕರೆದು ತಮ್ಮ ಹೆಂಗಸರಿಗೆ ಪರಿಚಯ ಮಾಡಿಕೊಟ್ಟರು. ಕೇಶವಚಂದ್ರ ಸೇನರು ಋಗ್ವೇದದ ಒಂದು ಪ್ರತಿಯನ್ನೂ, ಉಪನಿಷತ್ತನ್ನೂ ರಮಾಬಾಯಿಗೆ ಕೊಟ್ಟರು. ಹಾಗೇ ಅಂದಿನಿಂದ ರಮಾಬಾಯಿಯು ವೇದವನ್ನೂ, ಉಪನಿಷತ್ತುಗಳನ್ನೂ ಓದಲಾರಂಭಿಸಿದಳು.

ರಮಾಬಾಯಿಯ ಭಾಷಣಗಳಿಗೆ ಈಗ ಅನೇಕ ಕಡೆಗಳಿಂದ ಕರೆ ಬರಲಾರಂಭಿಸಿತು. ಹಾಗೇ ಇವರು ಢಾಕ್ಕಾ ಮುಂತಾದೆಡೆ ಸಂಚರಿಸಿದರು. ಅಸ್ಸಾಂನ ಶಿಲ್ಹಟ್ ಜಿಲ್ಲೆಗೆ ೧೮೭೯ನೇ ಸಪ್ಟೆಂಬರ್ ೧೭ನೇ ತಾರೀಕಿಗೆ ತೆರಳಿದರು. ಅಲ್ಲಿ ಮೆರವಣಿಗೆಯಲ್ಲಿ ಅವರನ್ನು ಕರೆದೊಯ್ದರು. ಅಲ್ಲಿಂದ ನಾಟ್ಯಮಂದಿರಕ್ಕೆ ತೆರಳಿ ಅಲ್ಲಿ ಸಂಸ್ಕೃತ ಭಾಷೆಯಲ್ಲಿ ಮಾನಪತ್ರ ವನ್ನೂ, ನಿಧಿಯನ್ನೂ ಅರ್ಪಿಸಲಾಯಿತು. ಕಾಲೀಚರಣದಾಸರು ಮಾನಪತ್ರ ಓದಿದರು. ಅಲ್ಲಿ ಪಂ. ರಮಾಬಾಯಿ ಸಂಸ್ಕೃತದಲ್ಲಿಯೇ ಈ ಮಾನಪತ್ರಕ್ಕೆ ದೀರ್ಘವಾದ ಉತ್ತರ ಭಾಷಣವನ್ನು ನೀಡಿದಳು. ಈ ಸಭೆಗೆ ಅಧ್ಯಕ್ಷರಾಗಿದ್ದವರು ಶಿಲ್ಹಟ್ ಡಿಲ್ಲಾ ಡೆ. ಕಮಿಷನರ್ ಮಿ. ಜೋನ್ಸನ್. ಅಲ್ಲಿಯೂ ಪಂಡಿತರು ವಿಧವಿಧವಾಗಿ ಇವರನ್ನು ಪರೀಕ್ಷಿಸಿದರೂ ಸಮರ್ಪಕವಾದ ಉತ್ತರಗಳಿಂದ ಅವರನ್ನು ಗೆದ್ದುಕೊಂಡರು. ಶಿಲ್ಹಟ್ ಜಿಲ್ಲಾ ಶಾಲೆ, ಕಾಲೇಜುಗಳಲ್ಲಿ ಅವಳ ಉಪನ್ಯಾಸವೇರ್ಪಡಿಸಿದರು. ಅಲ್ಲಿ ಅವಳಿಗೆ ಚಿನ್ನದುಂಗುರವನ್ನು ಬಹುಮಾನವಾಗಿ ನೀಡಲಾಯಿತು. ಅನಂತರ ಗಿರೀಶ ವಿದ್ಯಾಲಯದಲ್ಲಿ ವ್ಯಾಖ್ಯಾನಕ್ಕೆ ಕರೆ ಬಂದಿತು. ಸ್ವಾಗತ ಭಾಷಣವು ಬಿಪಿನ್ ವಿಹಾರಿದಾಸ್ ಎಂಬವರದಾಗಿತ್ತು. ಇವರು ರಮಾಬಾಯಿಯ ಪೂರ್ವಚರಿತ್ರೆಯನ್ನು ಒಳ್ಳೆ ಪ್ರಭಾವಶಾಲಿಯಾಗಿ ವರ್ಣಿಸಿದರು. ಆಗ ಸಹಜವಾಗಿ ಶ್ರೀನಿವಾಸನಿಗೂ – ಬಿಪಿನ್ ಬಿಹಾರಿದಾಸರಿಗೂ ಪರಿಚಯವಾಗಿ ಅವರಿಬ್ಬರೂ ಪರಮಾಪ್ತ ಸ್ನೇಹಿತರಾಗುವಂತಾಯಿತು.

## ದಾಂಪತ್ಯ ಬದುಕು

ಈಗ ಇಪ್ಪತ್ತು ವರುಷವಾದರೂ ರಮಾಬಾಯಿ ಯಾಕೆ ಮದುವೆಯಾಗದೇ ಇದ್ದಾರೆ? ಇದು ಜನರಿಗೊಂದು ಚರ್ಚಾ ವಿಷಯವಾದಂತಿತ್ತು. ತಂದೆ ಅನಂತಶಾಸ್ತ್ರಿ ಜೀವಂತವಿರುವಾಗಲೂ ಅವಳಲ್ಲಿ ಮದುವೆಯ ವಿಚಾರವನ್ನು ಪ್ರಸ್ತಾಪಿಸಿರಲಿಲ್ಲ. ಈಕೆಯ ಲಗ್ನ ಕುಂಡಲಿಯಲ್ಲಿ ಸಪ್ತಮದಲ್ಲಿ ಅಂಗಾರಕನಿರುವನೆಂದು ಕೆಲವರು ಅಂದಿದ್ದರು. ಆದರೆ ವಾಸ್ತವಿಕವಾಗಿ ಅನಂತ ಶಾಸ್ತ್ರಿ ಅಂಥ ಮೂಢನಂಬಿಕೆಯವರಾಗಿರಲಿಲ್ಲ. ದಕ್ಷಿಣ ಭಾರತದ ಭೂತಾರಾಧನೆ, ದೇವದಾಸಿ ಪದ್ಧತಿ ಎಲ್ಲವೂ ಹುಚ್ಚುತನವೆಂದು ತಂದೆ ಹೇಳುತ್ತಿದ್ದುದನ್ನು ರಮಾಬಾಯಿಯೇ ಕೇಳಿದ್ದಳು. ಸ್ವಜನರಿಗೂ, ಸಮಾಜಕ್ಕೂ ವಿರೋಧವಾಗಿ ಸ್ತ್ರೀಯರಿಗೆ ಸಂಸ್ಕೃತ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ''निस्पृहस्य तृणम् जगत्'' ಎಂಬಂತೆ ಅನಂತ ಶಾಸ್ತ್ರಿ ನಿಸ್ಪೃಹರಾಗಿದ್ದುದರಿಂದ ಸಮಾಜವು ವಿರೋಧ ವ್ಯಕ್ತಪಡಿಸಿದರೂ ಹಿಂಜರಿಯಲಿಲ್ಲ. ಅಂಥ ಗಟ್ಟಿತನವನ್ನು ತಮ್ಮಲ್ಲಿ ಮೈಗೂಡಿಸಿಕೊಂಡಿದ್ದ ಅಣ್ಣ-ತಂಗಿ ಬಂಗಾಳವನ್ನೆಲ್ಲ ಪ್ರವಾಸ ಮಾಡಿ, ೧೮೮೦ರಲ್ಲಿ ಢಾಕಾಗೆ ಬಂದು ನೆಲೆನಿಂತರು. ರಮಾಬಾಯಿ ಅಣ್ಣ ಶ್ರೀನಿವಾಸರಿಗೂ ಬಿಪಿನ್ ಬಿಹಾರಿ ದಾಸರಿಗೂ ಸ್ನೇಹವೇರ್ಪಟ್ಟಿತ್ತು. ಅಷ್ಟೇ ಸಲಿಗೆಯಲ್ಲಿ ಬಿಪಿನ್ ಬಾಬೂ ಸಹಜವಾಗೇ ರಮಾಬಾಯಿಯಲ್ಲಿ 'ನನ್ನನ್ನು ವರಿಸಿ ಗೃಹಲಕ್ಷ್ಮಿಯಾಗುತ್ತೀಯಾ?' ಎಂದು ಕೇಳಿದ್ದರು. ಎಂ.ಎ. ಮಾಡಿಕೊಂಡಿದ್ದ, ಸ್ವತಂತ್ರ ಉದ್ಯೋಗದಲ್ಲಿದ್ದ ಆ ತರುಣ ನ್ಯಾಯವಾದಿಯನ್ನು ವರಿಸಲು ಯಾವ ಆತಂಕಗಳಿರಲಿಲ್ಲ ನಿಜ. ಆದರೂ ಅವಳು ತನ್ನ ಸಹಜ ವೈಚಾರಿಕ ಗಾಂಭೀರ್ಯದಿಂದಲೇ ''ಇಲ್ಲ! ನಾನಿನ್ನೂ ಮದುವೆ ಯೋಚನೆಯಲ್ಲಿ ಇಲ್ಲ. ಈ ವಿಚಾರದಲ್ಲಿ ಅಣ್ಣನ ಅಭಿಪ್ರಾಯವನ್ನು ಅನುಮೋದಿಸುತ್ತೇನೆ. ಹಾಗೇ ಮದುವೆ ವಿಚಾರ ಬಂದರೆ ನಿಮ್ಮನ್ನೇ ಖಂಡಿತ ವರಿಸುತ್ತೇನೆ' ಎಂದು ಮಾತು ಕೊಟ್ಟಳು. ಶ್ರೀನಿವಾಸನೂ ಢಾಕ್ಕಾದಲ್ಲಿರುವಾಗ ತುಂಬ ನಿತ್ರಾಣವಾಗಿದ್ದ. ಮದ್ರಾಸಿನಲ್ಲಿದ್ದಾಗಿನ ಕ್ಷಾಮದ ಕಷ್ಟ ಸಾವಿರಾರು ಮೈಲಿಗಳ ಕಾಲ್ನಡಿಗೆಯ ಪ್ರವಾಸ ಇವೆಲ್ಲ ಶ್ರೀನಿವಾಸನ ಆರೋಗ್ಯದ ಮೇಲೆ ಗಾಢವಾದ ಪರಿಣಾಮ ಬೀರಿದ್ದವೇನೋ. ಇಂತಹ ಪರಿಸ್ಥಿತಿಯಲ್ಲಿ ಅಣ್ಣನನ್ನು ಬಿಟ್ಟು ಹೋಗಲು ತಂಗಿಗಾದರೂ ಹೇಗೆ ಮನಸ್ಸಾದೀತು?' ಆದ್ದರಿಂದ ಮದುವೆ ಬಗ್ಗೆ ಯೋಚನೆ ಮಾಡುವ ಸ್ಥಿತಿಯೂ ಅವಳಿಗಿದ್ದಂತಿಲ್ಲ. ಆದರೆ ದೈವನಿಯಾಮಕ ಯಾರಿಗೆ ಗೊತ್ತಿದೆ? ಕಷ್ಟಗಳ ಸರಮಾಲೆಯೇ ಹೊತ್ತುಕೊಂಡ ರಮಾಬಾಯಿಗೆ ೧೮೮೦ರ ಮೇ ೮ರಂದು ಅಣ್ಣ ಶ್ರೀನಿವಾಸನ ಅಗಲಿಕೆಯೂ ಸೇರಿತು. ಇದರಿಂದ ಅತೀವ ಶೋಕತಪ್ತಳಾದ ರಮಾಬಾಯಿ ಸ್ವಲ್ಪ ಅಧೀರಳಾದಂತಾಯಿತು. ಹಾಗೇ ಮೀರತ್ತಿಗೆ ತೆರಳಿ ಅಲ್ಲಿ ದಯಾನಂದ ಸರಸ್ವತಿಯವರನ್ನು ಭೇಟಿಯಾದಳು. ಶ್ರೀನಿವಾಸನ ಮರಣದ ವಾರ್ತೆ ಮಹಾರಾಷ್ಟ್ರದಲ್ಲೂ ಹಬ್ಬಿತ್ತು. ರಮಾಬಾಯಿಯನ್ನು ಕೆಲವು ಹಿರಿಯರು ಭೇಟಿಯಾಗಿ ಅವಳು ವಿವಾಹಿತಳಾಗಿ ಮುಂಬೈನ ಕನ್ಯಾ ಶಾಲೆಯ ಮುಖ್ಯಸ್ಥಳಾಗುವಂತೆ

ವಿನಂತಿಸಿದರು. ಹಾಗೇ ಮಾಡುವುದೇ ಸರಿಯೇನೋ ಅನ್ನುವ ನಿರ್ಧಾರಕ್ಕೆ ರಮಾಬಾಯಿ ಬಂದಳು. ಕಲ್ಕತ್ತದಲ್ಲೂ ಅನೇಕರು ವಿವಾಹಕ್ಕೆ ಸಲಹೆ ನೀಡಿದರು – ಅಪೇಕ್ಷಿಸಿದರು ಕೂಡ. ಇದರಿಂದ ಪರಿಸ್ಥಿತಿಯ ಗಂಭೀರತೆ ತಿಳಿದುಕೊಂಡ ರಮಾಬಾಯಿ ತಾನು ವಿವಾಹವಾಗಿ ಸಾಂಸಾರಿಕ ಜೀವನ ನಡೆಸುವುದೇ ಧರ್ಮವೆಂದು ನಿಶ್ಚಯಿಸಿದಳು. ಆಗ ಬಿಪಿನ್ ಬಿಹಾರಿ ಬಾಬುವು ಬಂದು ಅಣ್ಣನ ಮರಣದ ಬಗ್ಗೆ ದುಃಖಿಸಿದ್ದೇ ಅಲ್ಲದೇ ಅವಳಿಗೆ "ನೀನು ಏಕಾಂಗಿಯಾಗಿ ಕಷ್ಟಪಡುವುದಕ್ಕಿಂತ ವಿವಾಹವಾದರೆ ಕ್ಷೇಮ" ಎಂದ. ಹಾಗೇ ಇಷ್ಟಪಟ್ಟರೆ ತಾನು ಮದುವೆಯಾಗಲು ಸಿದ್ಧನಿದ್ದೇನೆ ಎಂದೂ ತಿಳಿಸಿದ. ರಮಾಬಾಯಿಗೂ, ಇದು ಸಮಂಜಸವೆನಿಸಿ, ೧೮೮೦ರಲ್ಲಿ ಜೂನ್ ೧೩ರಂದು 'ಬಾಂಕಿಪುರ' ಎಂಬಲ್ಲಿ ಸಿವಿಲ್ Marriage Act ಪ್ರಕಾರ ವಿವಾಹ ನೆರವೇರಿತು. ಬಿಪಿನ್ ಬಿಹಾರಿದಾಸ್ ಮೇಧಾವಿ. ಜಾತಿಯಲ್ಲಿ ಶೂದ್ರನೆನಿಸಿದ್ದರೂ ಅವನ ವಿಚಾರಧಾರೆ, ನ್ಯಾಯವಾದಿತ್ವ, ಗುಣ, ನಡತೆ ಎಲ್ಲವೂ ಉಚ್ಚವಾಗಿದ್ದವು. ಬಿಪಿನ್ ಚಂದ್ರಪಾಲರ ಸಹಾಧ್ಯಾಯಿಯೂ ಹೌದು. ೧೮೭೯ರಲ್ಲಿ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಬಿ.ಎಲ್. ಮುಗಿಸಿದ್ದರು. ರಸಾಯನ ಶಾಸ್ತ್ರದಲ್ಲಿ ಎಮ್.ಎ. ಮಾಡಿ, ವಿಶ್ವವಿದ್ಯಾನಿಲಯಕ್ಕೇ ಪ್ರಥಮ ಸ್ಥಾನ ಪಡೆದುಕೊಂಡಿದ್ದರು. "ರಸಾಯನ ಶಾಸ್ತ್ರದ ಉಪಕ್ರಮಣಿಕೆ" ಎಂಬ ರಸಾಯನ ಶಾಸ್ತ್ರದ ಪಾರಿಭಾಷಿಕ ಶಬ್ದಗಳ ಒಂದು ಅಮೂಲ್ಯ ಗ್ರಂಥವನ್ನು ಬಿಪಿನ್ ಬಾಬು ಬರೆದಿದ್ದರು. ಅದು ಬೆಂಗಾಲಿ ಭಾಷೆಯ ರಸಾಯನ ಶಾಸ್ತ್ರದ ಪ್ರಪ್ರಥಮ ಪುಸ್ತಕವಾಗಿದ್ದಿತು. ಅಲ್ಲದೇ ಬಿಪಿನ್ ಬಾಬು ಸಂಗೀತದಲ್ಲೂ ಪ್ರವೀಣರಾಗಿದ್ದವರು. ಇಷ್ಟೆಲ್ಲ ಇರುವ ಬಿಪಿನ್ ಬಿಹಾರಿದಾಸರನ್ನು ಮದುವೆಯಾಗಲು ಬ್ರಾಹ್ಮಣ ಜಾತಿಯ ರಮಾಬಾಯಿ ಯಾವ ಹಿಂಜರಿಕೆಯನ್ನೂ ತೋರಲಿಲ್ಲ. ಆದರೆ ವಾಸ್ತವವಾಗಿ ಈ ವಿವಾಹದಿಂದ ರಮಾಬಾಯಿಗೆ ಮೇಲ್ವರ್ಗದವರ ತಿರಸ್ಕಾರ ಶಾಶ್ವತವಾಗಿ ಬಿಟ್ಟಿತು. ಬ್ರಾಹ್ಮಣ ಜಾತಿಯಲ್ಲಿ ರಮಾಬಾಯಿಗೆ ಅನುರೂಪರಾದ ವರರ ಕೊರತೆಯಿರಲಿಲ್ಲ. ಐ.ಸಿ.ಎಸ್. ಪದವಿಯಲ್ಲಿ ಉತ್ತೀರ್ಣನಾಗಿ ದೊಡ್ಡ ಸರಕಾರಿ ಉದ್ಯೋಗದಲ್ಲಿದ್ದ ಶ್ರೀ ಪಾದ ಬಾಬಾಜಿ ಠಾಕೂರ್ ಎಂಬವನು ರಮಾಬಾಯಿಯನ್ನು ಮದುವೆಯಾಗಲಿಚ್ಛಿಸಿದ್ದ. ರಮಾಬಾಯಿಯೂ ಸಂಸ್ಕೃತಜ್ಞೆಯಾದ್ದರಿಂದ ಸಂಸ್ಕೃತ ವಿದ್ವಾಂಸನಾಗಿದ್ದ ಠಾಕೂರನಿಗೆ ಬಹಳವೇ ಆಕಾಂಕ್ಷೆ–ನಿರೀಕ್ಷೆ ಇತ್ತು. ಆದರೆ ರಮಾಬಾಯಿಯಿಂದ ಇದಕ್ಕೆಂದೂ ಪುರಸ್ಕಾರ ಸಿಗದಾಯಿತು. ಅವಳು ಮೊದಲು ಭಾಷೆ ಕೊಟ್ಟಂತೆ ಬಿಪಿನ್ ಬಿಹಾರಿದಾಸ್ ಮೇಧಾವಿಯನ್ನೇ ಮದುವೆಯಾದಳು. ಮುಂದೆಯೂ ಈ ಪ್ರಶ್ನೆ ಬಂದಾಗ ರಮಾಬಾಯಿ "ನಾನು ಯಾವ ಪ್ರಲೋಭನ ಅಥವಾ ಒತ್ತಾಯಕ್ಕಾಗಿ ಬಿಪಿನ್ ಬಾಬು ಅವರನ್ನು ವರಿಸಲಿಲ್ಲ. ನಾನು ಮನಃಪೂರ್ವಕ ಒಪ್ಪಿ ಆತ್ಮಸಾಕ್ಷಿಗೆ ಸರಿಯಾಗಿ ವರಿಸಿರುವುದಲ್ಲದೇ ಅನ್ಯಥಾ ಯಾವ ಕಾರಣವೂ ಇಲ್ಲ" ಎಂದುತ್ತರಿಸಿದಳು. ಬಿಪಿನ್ ಮೇಧಾವಿ ಶೂದ್ರನಾದರೇನು? ಬ್ರಾಹ್ಮಣನಾದರೇನು? ಅವನು ನಿಜವಾಗಿ ಮೇಧಾವಿಯಾಗಿದ್ದನು. ಅವನ ಅಸಾಧಾರಣ ವ್ಯಕ್ತಿತ್ವ ರಮಾಬಾಯಿಯನ್ನು ಸಹಜವಾಗಿ ಆಕರ್ಷಿಸಿತ್ತು. ಅಲ್ಲಿ ಜಾತಿ ನಗಣ್ಯವಾಗಿತ್ತು.

ಇಲ್ಲಿ ಬಿಪಿನ್ ಬಾಬು ರಮಾಬಾಯಿಯನ್ನು ವರಿಸುವುದು ಅವನ ಜಾತಿಯವರಿಗೂ ಇಷ್ಟವಿರಲಿಲ್ಲ. ಈ ಒಂದು ಕಾರಣಕ್ಕಾಗಿ ರಿಜಿಸ್ಟರ್ಡ್ ಮದುವೆ ಆಗಬೇಕಾಯಿತು. ಮದುವೆಯ ನಂತರ ಬಿಪಿನ್ ಬಾಬು ಸಿಲ್ಹೆಟ್‌ನಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ಬಿಪಿನ್ ಬಾಬು ಮನೆಯಲ್ಲಿ ಹೇರಳವಾದ ಪುಸ್ತಕ ಭಂಡಾರವಿತ್ತು. ಅದರಲ್ಲಿ "ಲೂಕನ ವರ್ತಮಾನ" ಎಂಬ ಪುಸ್ತಕವೂ ಇತ್ತು. ಬಂಗಾಳಿ ಭಾಷೆಯಲ್ಲಿದ್ದ ಈ ಪುಸ್ತಕ, ಅದರ ವಿಚಾರಗಳು ರಮಾಬಾಯಿ ಜೀವನದ ದಿಕ್ಕನ್ನೇ ಬದಲಾಯಿಸಿದವು.

ಇರಲಿ, ಈಗ ೧೮ ತಿಂಗಳ ದಾಂಪತ್ಯ ನಡೆದಿತ್ತು ರಮಾಬಾಯಿಯದು. ಸುಖಮಯ–ಸುಂದರ ಸಂಸಾರಕ್ಕೆ ಒಂದು ರತ್ನದ ಸೇರ್ಪಡೆಯಾಯಿತು. ೧೮೮೧ ಏಪ್ರಿಲ್ ೧೬ಕ್ಕೆ ಮಗಳು ಮನೋರಮೆಯ ಜನನವಾಯಿತು. ರಮಾಬಾಯಿಯ ಜೀವನದ ಸುಂದರ ಗಳಿಗೆಗಳು ಇವು. ಪತಿ–ಮಗಳ ಜತೆ ಸಂತಸದಲ್ಲಿರುವಾಗಲೇ ವಿಧಿ ನಿಯಮ ಬೇರೇ ಇತ್ತೇನೋ. ರಮಾಬಾಯಿಗೆ ಫ್ಲೂ ಜ್ವರ ಬಂತು. ಬಳಲಿಕೆ ತುಂಬ ಇತ್ತು. ಅವತ್ತು ಬಿಪಿನ್ ಬಾಬುವಿಗೆ ಕೋರ್ಟ್‌ನಲ್ಲಿ ತುಂಬ ಮಹತ್ವದ ಮೊಕದ್ದಮೆ ಬೇರೆ. ಮನೆಯ ಕಡೆ ಗಮನವೀಯಲಾಗಲಿಲ್ಲ. ಸಂಜೆ ಬಂದಾಗ ಮನೆಯ ಪರಿಸ್ಥಿತಿ ಅರಿವಾಯಿತು. ಇದ್ದೊಬ್ಬ ಸೇವಕಿಯೂ ಜ್ವರದಿಂದ ಮಲಗಿದ್ದಳು. ಹೀಗಾಗಿ ಮನೋರಮೆಯ ಲಾಲನೆ ಜವಾಬ್ದಾರಿ ಬಿಪಿನ್‌ಗೇ ಸೇರಿತು. ಹೊತ್ತು–ಹೊತ್ತಿಗೆ ಮನೆದೀಪ ಬೆಳಗಿ–ತಂದೆ ಮಗುವನ್ನು ನೋಡಿಕೊಳ್ಳುತ್ತ ಇದ್ದ ರಮಾಬಾಯಿಯ ಅಸ್ವಸ್ಥತೆ ಬಿಪಿನ್ ಬಾಬುವನ್ನು ಅಲ್ಲಾಡಿಸಿತು.

ಇದೇ ಸಮಯದಲ್ಲಿ ಕಲ್ಕತ್ತದಲ್ಲಿ ಕಾಲರಾ ಆರಂಭವಾಗಿತ್ತು. ಈ ಕಾಲರಾ ಬಿಪಿನ್ ಮನೆ ಬಾಗಿಲಲ್ಲಿ ನಿಂತಿತ್ತು. ಬಿಪಿನ್ ಬಿಹಾರಿದಾಸ್ ಮೇಧಾವಿ ಎಂಬ ವ್ಯಕ್ತಿತ್ವ ಕಾಲರಾದ ಹಿಡಿತದಿಂದ ಹೊರಬರದೆ ಹೋಯಿತು. ನಮ್ಮ ರಮಾಬಾಯಿ ಮತ್ತೆ ಕಷ್ಟದ ಕೂಪಕ್ಕೇ ಬಿದ್ದ ಹಾಗಾಯಿತು. ತಂದೆ–ತಾಯಿ–ಅಕ್ಕ–ಅಣ್ಣ ಈಗ ಕೊನೆ ಆಸರೆಯಾಗಿದ್ದ ಗಂಡನೂ ಹೋದಾಗ ಅವಳ ಸ್ಥಿತಿ ಹೇಗಿರಬೇಡ! ದುಃಖದಲ್ಲಿ ಕುಸಿದ ರಮಾಬಾಯಿಗೆ ಇದ್ದುದು ಒಂದೇ ಬೆಳಕಿನ ಕಿಡಿ, ಮಗಳು ಮನೋರಮೆ. ದುಃಖವನ್ನು ಹೊದ್ದುಕೊಂಡ ರಮಾಬಾಯಿ ಅದರಲ್ಲೇ ಹುದುಗಿಕೊಳ್ಳಲಿಲ್ಲ. ತಕ್ಷಣ ಇಂಗ್ಲಿಷ್ ಕಲಿಕೆಗೆ ತೊಡಗಿಸಿಕೊಂಡಳು.

ಬಂಗಾಳದಿಂದ ನೇರವಾಗಿ ಆಸೆಯ ಎಳೆಯನ್ನು ಹೊತ್ತು ಮದರಾಸಿಗೆ ಬಂದಳು. ಆದರೆ ಅಲ್ಲಿ ಅವಳಿಗೆ ಅನುಕೂಲಕರವಾದ ವಾತಾವರಣವಿದ್ದಂತಿರಲಿಲ್ಲ. ಹಾಗೇ ನೇರವಾಗಿ ಪುಣೆ ದಾರಿ ಹಿಡಿದಳು ರಮಾಬಾಯಿ.

## ಸಮಾಜಸೇವಾ ಅಡಿಪಾಯ - ಆರಂಭ

ಮಹಾರಾಷ್ಟ್ರದ ಪುಣೆಯಲ್ಲಿ ಲೋಕಮಾನ್ಯ ತಿಲಕರು, ಗೋಪಾಲ ಗಣೇಶ ಅಗರ್ಕರ್, ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆ ಮುಂತಾದವರು ಅನೇಕ ರೀತಿಯಿಂದ ಜನಜಾಗೃತಿ ಉಂಟುಮಾಡಿದ್ದರು. ಒಂದು ರೀತಿಯಲ್ಲಿ ದೇಶ ಸೇವೆಯಲ್ಲಿ ಕಾರ್ಯಕರ್ತರ ಕೇಂದ್ರವಾಗಿತ್ತು ಈ ಪುಣೆ. ಈಗಾಗಲೇ ಸ್ತ್ರೀ ಶಿಕ್ಷಣದ, ಸಂಸ್ಕೃತದ ಭಂಡಾರವೆನಿಸಿದ್ದ ರಮಾಬಾಯಿಯ ಕೀರ್ತಿ ಪುಣೆ ಜನರನ್ನು ಪ್ರಭಾವಗೊಳಿಸಿತ್ತು. ನ್ಯಾಯಮೂರ್ತಿ ರಾನಡೆಯವರು ತನ್ನ ಕುಶಲ ಬುದ್ಧಿಚಾತುರ್ಯದಿಂದ ಮಹಾರಾಷ್ಟ್ರದ ಜನರಲ್ಲಿ ಚೈತನ್ಯ ತುಂಬುವಂಥವರಾಗಿದ್ದರು. ಸೌ। ರಾನಡೆಯವರೂ ರಮಾಬಾಯಿ ಪುಣೆಗೆ ಬಂದದ್ದರಿಂದ ಬಹಳ ಆನಂದತುಂದಿಲರಾದರು. ವಿಶೇಷವಾಗಿ ಉಪಚರಿಸಿ ಆದರದಿಂದ ಕಂಡರು. ರಮಾಬಾಯಿಗೆ ವಾಸದ ವ್ಯವಸ್ಥೆಯನ್ನೂ ರಾನಡೆಯವರು ಮಾಡಿಕೊಟ್ಟರಲ್ಲದೇ ಆಕೆಯ ಪುರಾಣ ಪ್ರವಚನವನ್ನು ತಮ್ಮ ಮನೆಯಲ್ಲಿಯೇ ನಡೆಯುವಂತೆ ಏರ್ಪಾಡು ಮಾಡಿದರು. ಸಬ್‌ಜಡ್ಜ್ ಆಗಿದ್ದ ಮಹಾದೇವ ಗೋವಿಂದ ರಾನಡೆಯವರು ರಮಾಬಾಯಿಯ ಪಾಂಡಿತ್ಯವನ್ನೂ, ಭಾಗವತವೇ ಮುಂತಾದ ಪುರಾಣಗಳ ವಿವರಣಾ ಚಾತುರ್ಯವನ್ನೂ ನೋಡಿ ಮೆಚ್ಚಿದರು. ಇಂಗ್ಲಿಷ್ ಭಾಷೆಯಲ್ಲಿ ಇನ್ನೂ ಪಳಗಬೇಕೆನ್ನುವ ಉದ್ದೇಶ ರಮಾಬಾಯಿಯವರದಾಗಿತ್ತು. ಅದಕ್ಕೆ ಸರಿಯಾಗಿ ಸೌ। ರಮಾಬಾಯಿ ರಾನಡೆಯವರಿಗೆ ಮನೆಯಲ್ಲಿ ಇಂಗ್ಲಿಷ್ ಕಲಿಸಲೋಸುಗ ಅಲ್ಲಿಯ ಪ್ರಾಂಶುಪಾಲಳಾದ ಮಿಸ್। ಹರ್‌ಫರ್ಡ್ ಎಂಬಾಕೆಯನ್ನು ರಾನಡೆಯವರು ನೇಮಿಸಿದ್ದರು. ಸೌ। ರಮಾಬಾಯಿ ರಾನಡೆಯವರೂ ಪಂ। ರಮಾಬಾಯಿ ಜೊತೆಗೇ ಇಂಗ್ಲಿಷ್ ಅಭ್ಯಾಸ ಮಾಡಲು ಉತ್ಸಾಹ ತೋರಿಸಿದರು. ಹೀಗೆ ಇಬ್ಬರೂ ಇಂಗ್ಲಿಷ್ ಪಠ್ಯಪುಸ್ತಕಗಳ ಅಭ್ಯಾಸ - ಅಧ್ಯಯನ ಆರಂಭಿಸಿದರು.

ರಮಾಬಾಯಿಯ ಪುಣೆ ವಾಸ್ತವ್ಯ ಜನರಿಗೆ ಬಹಳ ಖುಷಿ ತಂದಿತ್ತು. ಅನೇಕ ಕಡೆಗಳಿಂದ ಪುರಾಣ ಪ್ರವಚನಾದಿಗಳಿಗೆ ಆಮಂತ್ರಣ ಬರತೊಡಗಿತು. ರಮಾಬಾಯಿಯ ವ್ಯಾಖ್ಯಾನಗಳಿಗೆ ಮಹಾದೇವ ಗೋವಿಂದ ರಾನಡೆಯವರೂ ಅವರ ಪತ್ನಿಯೂ ತಪ್ಪದೇ ಹಾಜರಾಗುತ್ತಿದ್ದರು. ತಡವಾಗಿ ಬಂದವರಿಗೆ ಕೂತುಕೊಳ್ಳಲು ಸಿಗದಷ್ಟು ಜನಸಂದಣಿ ಅವರ ಪ್ರವಚನಗಳಲ್ಲಿರುತ್ತಿತ್ತು. ರಮಾಬಾಯಿಯ ವಿಷಯ ಪ್ರತಿಪಾದನೆ ಶೈಲಿ, ಪಾಂಡಿತ್ಯ ಪೂರ್ಣ ವಿಚಾರಗಳು ಎಲ್ಲವೂ ಕೇಳುಗರನ್ನು ಮಂತ್ರ ಮುಗ್ಧರನ್ನಾಗಿಸುತ್ತಿದ್ದವು. ಎಲ್ಲೆಲ್ಲೂ ರಮಾಬಾಯಿಯದೇ ಮಾತಾಗುವಂತಾಯಿತು.

ಜನಮೆಚ್ಚುಗೆ ಪಡೆದಷ್ಟು ವ್ಯಕ್ತಿ ಟೀಕೆಗೂ ಒಳಗಾಗಬೇಕಾಗುತ್ತದೆ. ಇದು ಕಟುಸತ್ಯ. ಇದು ರಮಾಬಾಯಿಯ ವಿಚಾರದಲ್ಲಿ ಸತ್ಯವಾಯಿತು. ಪುಣೆಯಲ್ಲಿ ಅವರನ್ನು ದೂರುವವರೂ ಬಹಳಿದ್ದರು. ವಿಶೇಷವೆಂದರೆ ಅಂತಹವರು ಹೆಚ್ಚಾಗಿ ಹೆಂಗಸರೇ ಆಗಿದ್ದರು. ನಾಲಿಗೆಗೆಲ್ಲಿ ಎಲುಬಿದೆ? ನಿರುದ್ಯೋಗಿ ಹೆಂಗಸರು ಕಟ್ಟೆ ಚರ್ಚೆಯಲ್ಲಿ ರಮಾಬಾಯಿ

ವಿಚಾರವನ್ನೇ ತುಂಬಿಕೊಂಡಿರುತ್ತಿದ್ದರು. ಜಾತಿಭ್ರಷ್ಟಳು, ಶೂದ್ರನನ್ನು ವಿವಾಹವಾದವಳು - ಸಂಸಾರವನ್ನು ಸರಿಯಾಗಿ ಅನುಭವಿಸಲಾಗದ ನತದೃಷ್ಟೆ ಈಗ ಊರನ್ನೆಲ್ಲ ಕೆಡಿಸುತ್ತಿದ್ದಾಳೆ ಎಂದೆಲ್ಲ ನಿಂದಿಸಹತ್ತಿದ್ದರು. ಜತೆಗೆ ತಮ್ಮ ಗಂಡಂದಿರಿಗೆ, "ನೀವು ಬೇಕಾದರೆ ಅವಳ ಪ್ರವಚನ ಏನು, ಅವಳನ್ನೇ ತಲೆಮೇಲಿಟ್ಟುಕೊಳ್ಳಿ. ಆದರೆ, ಸಭೆಗೆ ಹೋಗಿ ಅವಳಿಂದ ಭ್ರಷ್ಟರಾಗಿ ನಮ್ಮನ್ನೂ ಭ್ರಷ್ಟರಾಗಿ ಮಾಡದಿರಿ" ಎಂದು ಗದರಿಸುತ್ತಿದ್ದರು. ಆದರೆ ಗಾದೆ 'ನಾಯಿ ಬೊಗಳಿದರೆ ದೇವಲೋಕ ಕೆಡಲಹುದೇ?' ಎಂಬಂತೆ ರಮಾಬಾಯಿ ನಿರ್ಲಿಪ್ತರಾಗಿದ್ದು ಮುನ್ನಡೆದಿದ್ದರು.

ಇತ್ತ ಸೌ। ರಮಾಬಾಯಿ ರಾನಡೆ ಹಾಗೂ ಪಂ। ರಮಾಬಾಯಿ ಇವರಿಬ್ಬರ ಪ್ರಯತ್ನದಿಂದ ಪುಣೆಯಲ್ಲಿ ಪ್ರಪ್ರಥಮವಾಗಿ "ಆರ್ಯ ಮಹಿಳಾ ಸಮಾಜ" ಎಂಬ ಹೆಸರಿನ ಸಂಸ್ಥೆ ಮೇ ೧, ೧೮೮೨ರಂದು ಸ್ಥಾಪಿಸಲ್ಪಟ್ಟಿತು. ಇದಕ್ಕಿಂತ ಮೊದಲು ಪುಣೆಯಲ್ಲಿ ಆಗಾಗ ಸ್ತ್ರೀಯರ ಸಭೆಗಳು ಸೇರಿದರೂ, ಒಂದು ನಿಶ್ಚಿತವಾದ ಉದ್ದೇಶ, ಯೋಜನೆ ಇದ್ದಂತಿರಲಿಲ್ಲ. "ಸ್ತ್ರೀಯರ ನಿರಕ್ಷರತೆ, ಪರಾವಲಂಬನ ಇತ್ಯಾದಿಗಳನ್ನು ತಪ್ಪಿಸಬೇಕು. ಅವರು ತಮ್ಮ ಸಂಕಷ್ಟಗಳ ನಿವಾರಣೆಗೆ ತಾವೇ ಸಂಘಟಿತರಾಗಬೇಕು, ಸದಾಚರಣೆ, ನೀತಿಮಾರ್ಗ, ಧರ್ಮಜ್ಞಾನ ಇತ್ಯಾದಿಗಳ ಬೋಧನೆ ಮಾಡುವುದು. ಪರಸ್ಪರ ಪರಿಚಯದಿಂದ ಸ್ನೇಹಾಚಾರವನ್ನು ಹೆಚ್ಚಿಸುವುದು ಮತ್ತು ಸ್ತ್ರೀಯರ ಸರ್ವತೋಮುಖವಾದ ಏಳಿಗೆಗಾಗಿ ಪ್ರಯತ್ನಿಸುವುದು ಇವೆಲ್ಲ ಆರ್ಯ ಸಮಾಜದ ಮುಖ್ಯ ಉದ್ದೇಶಗಳು."

ಆರ್ಯ ಮಹಿಳಾ ಸಮಾಜದ ಸಭೆಗಳಿಗೆ ಜನ ಕಿಕ್ಕಿರಿದು ಬರಲಾರಂಭಿಸಿದರು. ಆಮಂತ್ರಣ ಪತ್ರಿಕೆಗಳಲ್ಲಿ ಪ್ರತಿ ಮನೆಯಿಂದ ಬರುವಾಗ, ತಮ್ಮ ಮನೆಯಿಂದ ಹೆಂಗಸರ ಸಂಗಡ ಬರಬೇಕು. ಇಲ್ಲವಾದರೆ ಗಂಡಸರಿಗೆ ಸಭೆಯಲ್ಲಿ ಪ್ರವೇಶವಿಲ್ಲ ಎಂದು ಬರೆಯಲಾಗುತ್ತಿತ್ತು. ಈ ಮೂಲಕ ಹೆಂಗಸರನ್ನು ಅವಶ್ಯವಾಗಿ ಬರಮಾಡಲಾಗುತ್ತಿತ್ತು. ಈ ಉಪಾಯ ರಮಾಬಾಯಿಯವರದಾಗಿತ್ತು. ಅವರ ಭಾಷಣಗಳು ವಿರೋಧಿಗಳೂ ಬಾಯ್ಮುಚ್ಚುವಷ್ಟು ಪರಿಣಾಮಕಾರಿಗಳಾಗಿದ್ದವು. ಸನಾತನಿಗಳು, ಸುಧಾರಕರು, ಮುದುಕರು, ತರುಣರೂ ಎಲ್ಲ ವರ್ಗದ ಜನರೂ ಈ ಸಭೆಗಳಿಗೆ ಬರುತ್ತಿದ್ದರು. ಮಹಿಳಾ ಅಧಿವೇಶನದಲ್ಲಿ ರಮಾಬಾಯಿ 'ಭಾರತದ ಭಗಿನಿಯರಲ್ಲಿ ನನಗೆ ಭೇದಭಾವವಿಲ್ಲ. ನಾನು ಜೀವಂತವಾಗಿ ರುವವರೆಗೂ, ಮಹಿಳೆಯರ ಉದ್ಧಾರಕ್ಕಾಗಿ ಶ್ರಮಿಸುತ್ತೇನೆ. ಇದಕ್ಕೆಂದಿಗೂ ನಾನು ಹಿಂಜರಿಯುವುದಿಲ್ಲ' ಎಂಬುದಾಗಿ ಘೋಷಿಸಿದರು. ಅನಂತರ ರಮಾಬಾಯಿ ಮುಂಬೈ, ಸೋಲಾಪುರ, ಅಹಮದ್‌ನಗರ, ಠಾಣಾ, ಬಾರ್ಸಿ ಮುಂತಾದೆಡೆ ಸಂಚಾರ ನಡೆಸಿ ಆರ್ಯ ಮಹಿಳಾ ಸಮಾಜದ ಶಾಖೆಗಳನ್ನು ಸ್ಥಾಪಿಸಿದರು. ಎಲ್ಲ ಕಡೆ ಬೆಂಬಲ ಧನ ಸಹಾಯವೂ ಸಿಕ್ಕಿತು.

ಆರ್ಯ ಮಹಿಳಾ ಸಮಾಜದ ಚಳವಳಿಯ ವಿಚಾರ ತಿಳಿದು ಎಲ್ಲ ಕಡೆಗಳಿಂದಲೂ

ಪ್ರೋತ್ಸಾಹ, ಪ್ರಸಿದ್ಧಿ ದೊರಕಿದವು. ಪತ್ರಿಕೆಗಳಲ್ಲೂ ಸುದ್ದಿ ವಿಶೇಷವಾಗಿ ಪ್ರಕಟವಾಯಿತು. ಇದಾದ ನಂತರ ಒಂದು ವರುಷದಲ್ಲಿ "ಸ್ತ್ರೀ ಧರ್ಮನೀತಿ" ಎಂಬ ಮರಾಠಿ ಕೃತಿಯನ್ನು ರಚಿಸಿದರು. ಪ್ರಕಟವಾದ ಆರು ತಿಂಗಳಲ್ಲಿ ಆ ಕೃತಿಯ ಪ್ರತಿಗಳೆಲ್ಲ ಮುಗಿದು ಮರು ಮುದ್ರಿಸಬೇಕಾಯಿತು. ೧೮೮೨ರಲ್ಲಿ ಪ್ರಕಟವಾದ ಮೊದಲ ಮುದ್ರಣದ ಹೆಚ್ಚಿನ ಕೃತಿಗಳನ್ನು ವಿದ್ಯಾ ಇಲಾಖೆಯವರೇ ಖರೀದಿಸಿದರು. ಈ ಪುಸ್ತಕದಲ್ಲಿ ಒಟ್ಟು ಎಂಟು ಪ್ರಕರಣ ವಿಭಾಗಗಳಿವೆ. ಸ್ತ್ರೀಯರ ನಿರಕ್ಷರತೆ, ಅಜ್ಞಾನ, ಪರಾವಲಂಬನ, ಉದಾಸೀನತೆ ಇತ್ಯಾದಿ ಪ್ರಸ್ತಾಪವಿದೆ. ವಿದ್ಯೆ, ಜ್ಞಾನಸಂಪಾದನೆ, ಸ್ವಾವಲಂಬನೆ, ಸೇವಾವೃತ್ತಿ, ಸೌಜನ್ಯ, ಮನೆವಾರ್ತೆ, ಶಿಶು ಸಂಗೋಪನ ಇತ್ಯಾದಿ ವಿಚಾರಗಳೂ ಸರಳ ಭಾಷೆಯಲ್ಲಿ ನಮೂದಿತವಾಗಿವೆ. ಯಾವ ಕಾಲಕ್ಕೂ ಈ ಪುಸ್ತಕದ ವಿಚಾರಗಳು ಸಮಂಜಸವೆನಿಸುವಂತಿದ್ದವು.

ಸಂ। ರಮಾಬಾಯಿಯ ವಾಕ್ ಸಾಮರ್ಥ್ಯ. ಸಂಘಟನಾ ಚಾತುರ್ಯದಿಂದ ಆರ್ಯ ಮಹಿಳಾ ಸಮಾಜದ ಕೆಲಸಗಳು ಮುಂದುವರೆದಿದ್ದವು. ಇದಾದ ಕೆಲವೇ ಸಮಯದಲ್ಲಿ ಆಗಿನ ವೈಸ್‌ರಾಯ ಲಾರ್ಡ್ ರಿಪ್ಪನ್ ಸಾಹೇಬರು ಭಾರತದ ಪ್ರಾಥಮಿಕ ಶಿಕ್ಷಣದ ವಿಚಾರವಾಗಿ ಮಿ। ಹಂಟರ್‌ನ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿಯನ್ನು ನೇಮಿಸಿದರು. ವಿಚಾರಣಾ ಸಮಿತಿಯವರಿಗೆ ಭಾರತದ ಸ್ತ್ರೀ ವಿದ್ಯಾಭ್ಯಾಸದ ಕುರಿತಾದ ಎಲ್ಲ ಸಾಕ್ಷ್ಯಾಧಾರಗಳೊಂದಿಗೆ ವಿವರಣೆ ಕೊಡುವ ಕೆಲಸವು ಆರ್ಯ ಸಮಾಜದ ಮಹಿಳಾ ಪ್ರತಿನಿಧಿ ಯಾದ ಪ। ರಮಾಬಾಯಿಯವರ ಪಾಲಿಗೆ ಬಂದಿತ್ತು. ಮೇಲಿನ ಹಂಟರ್ ಸಮಿತಿಯ ಎದುರಿಗೆ ಜನಗಣತಿಯ ಆಧಾರಗಳಿಂದ ರಮಾಬಾಯಿ ಬಹಳ ವಿಚಾರಾತ್ಮಕವಾಗಿ, ಸಮರ್ಥಕವಾಗಿ ಹಾಗೂ ಸ್ಪಷ್ಟವಾಗಿ ಸಾಕ್ಷ್ಯಕೊಟ್ಟರು.

"ಭಾರತ ದೇಶದ ಒಂಬತ್ತು ಕೋಟಿ ತೊಂಬತ್ತೇಳು ಸಾವಿರ ಸ್ತ್ರೀ ಜನಸಂಖ್ಯೆಯಲ್ಲಿ ಕೇವಲ ಎರಡು ಲಕ್ಷ ಜನರಿಗೆ (ಸ್ತ್ರೀಯರಿಗೆ) ಸಾಧಾರಣ ಓದುಬರಹ ಇದೆ. ಬಾಲ್ಯ ವಿವಾಹ ಪದ್ಧತಿಯಿಂದ ಒಂಬತ್ತು-ಹತ್ತು ವರ್ಷದೊಳಗೆ ಹುಡುಗಿಯರು ಶಾಲೆ ಬಿಡಬೇಕಾಗಿರು ವುದರಿಂದ ಎರಡು ಅಥವಾ ಮೂರನೆ ದರ್ಜೆಗಿಂತ ಹೆಚ್ಚಿನ ಶಿಕ್ಷಣವು ದೊರಕುವಂತಿಲ್ಲ. ಕೇವಲ (basic science) ಪುಸ್ತಕ ಓದುವಿಕೆ, ಗುಣಾಕಾರ, ಭಾಗಾಕಾರ ಇಷ್ಟೇ ಅಲ್ಲದೆ ಹೆಚ್ಚಿನ ಅನುಭವವು ಹುಡುಗಿಯರಿಗೆ ಸಿಗುವಂತಿಲ್ಲ. ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟು ಜನರೂ ನಿರಕ್ಷರರಾದರೆ ದೇಶೋದ್ಧಾರದ ಕನಸು ಹೇಗೆ ಸಾಧ್ಯ?"

ಹಾಗೇ ಬಾಲಿಕಾ ಪಾಠಶಾಲೆಗಳಲ್ಲಿ ಕಲಿಸುವ ಶಿಕ್ಷಕಿಯರು ಹೆಚ್ಚು ವಿದ್ಯಾವಂತರಾಗಿ, ತರಬೇತಿ ಹೊಂದಿದವರಾಗಿರಬೇಕು. ಅಲ್ಲದೆ ಗೌರವಯುತವಾದ ಜೀವನ ನಡೆಸುವವರಿಗೆ ವೇತನ ಹೆಚ್ಚಿಸಬೇಕು. ಹಾಗೇ ಕಾಲೇಜಿನ ವಸತಿ ಗೃಹಗಳಲ್ಲಿ ವಿದ್ಯಾರ್ಥಿನಿಯರಿಗೂ, ಶಿಕ್ಷಕಿಯರಿಗೂ ಇರಲಿಕ್ಕೆ ಅನುಕೂಲತೆಗಳಿರಬೇಕು, ವಸತಿ ಗೃಹಗಳು ಎಲ್ಲ ಸಲಕರಣೆಗಳಿಂದ ಕೂಡಿರಬೇಕೆಂದೂ, ಹಾಗೇ ಅಧ್ಯಾಪಿಕೆಯರ ಆಯ್ಕೆ ಸಂದರ್ಭದಲ್ಲಿ ಅವರ ಸನ್ನಡತೆ,

ಚಾರಿತ್ರ್ಯವನ್ನು ಗಣನೆಗೆ ತೆಗೆದುಕೊಳ್ಳಬೇಕೆಂಬುದು ರಮಾಬಾಯಿಯವರ ಸಲಹೆಯಾಗಿತ್ತು.

ಜೇಕಬ್ ಸಾಹೇಬರು ಈಗಿನ ಶಿಕ್ಷಣ ಪದ್ಧತಿಯಲ್ಲಿರುವ ದೋಷಗಳು – ಅವುಗಳ ನಿವಾರಣೆ ಬಗ್ಗೆ ಕೇಳಿದಾಗ ರಮಾಬಾಯಿ ನೀಡಿದ ಉತ್ತರವೂ ಅಷ್ಟೇ ತಾತ್ವಿಕವಾಗಿತ್ತು.

ಈಗಿನ ಪದ್ಧತಿಯಂತೆ ಪುರುಷರಾದ ಪರೀಕ್ಷಾಧಿಕಾರಿಗಳು ಹುಡುಗಿಯರ ಶಾಲೆಯ ಸಂದರ್ಶನಕ್ಕೆ ಯೋಗ್ಯರಲ್ಲ. ಏಕೆಂದರೆ ಸ್ತ್ರೀ ಸಹಜ ಸಂಕೋಚ ಭೀತಿಗಳಿಂದ ಸರಿಯಾದ ಉತ್ತರಗಳು ಸಿಗದಿದ್ದರೆ ಶಾಲೆಗಳಿಗೆ ಶಿಫಾರಸ್ಸು (permission) ಇಲ್ಲವಾಗಬಹುದು. ಹಾಗೇ ಹುಡುಗಿಯರ ಶಾಲೆಗಳಿಗೆ ಸ್ತ್ರೀಯರೇ ಅಧ್ಯಾಪಕಿಯರಾಗಬೇಕು. ಮರ್ಯಾದಸ್ಥ ಬಡಸ್ತ್ರೀಯರು ವಿದ್ಯೆ ಹಾಗೂ ಧೈರ್ಯದ ಅಭಾವದಿಂದ ಬಲಾತ್ಕಾರಕ್ಕೆ ಒಳಗಾಗಬಹುದು. ಸಾಮಾನ್ಯವಾಗಿ ಪುರುಷರ ಹೇಳಿಕೆಯನ್ನು ಸತ್ಯವೆಂದು ಅಧಿಕಾರಿಗಳು ನಂಬಿ ಬಿಡುವುದರಿಂದ ಸ್ತ್ರೀಯರು ಅಸಹಾಯಕತೆಯಿಂದ ಬಳಲುವಂತಾಗುತ್ತದೆ. ಸ್ತ್ರೀಯರನ್ನು ಹೀಗೆ ಗುಲಾಮಗಿರಿಯಲ್ಲಿಡುವುದು ಒಳ್ಳೇ ಸರಕಾರದ ಲಕ್ಷಣವಲ್ಲ. ಭಾರತದಲ್ಲಿ ಸ್ತ್ರೀ ಡಾಕ್ಟರ್‌ಗಳ ಅಭಾವವಿದೆ. ಇಲ್ಲಿ ವೈದ್ಯರಲ್ಲಿ ಗಂಡಸರು ಬಹಳಷ್ಟಿದ್ದರೂ ಅವಶ್ಯವಾಗಿ ಸ್ತ್ರೀಯರಿಗೆ ಸ್ತ್ರೀ ಡಾಕ್ಟರ್‌ಗಳ ಅಗತ್ಯತೆಯಿದೆ. ಆದ್ದರಿಂದ ನಮ್ಮ ದೇಶದಲ್ಲಿ ಸ್ತ್ರೀಯರಿಗೆ ವೈದ್ಯಕೀಯ ಶಿಕ್ಷಣ ದೊರಕುವಂತಾಗಿ ಹೆಂಗಸರ ದವಾಖಾನೆಗಳು ಪ್ರಾರಂಭಗೊಳ್ಳಬೇಕು. ಈಗಾಗಲೇ ಮುಂಬೈಯಲ್ಲಿ ಕಾಲೇಜ್ ಆಫ್ ಮೆಡಿಸಿನ್‌ನಲ್ಲಿ ನರ್ಸಿಂಗ್ ಟ್ರೈನಿಂಗ್ ಆರಂಭವಾಗಿದ್ದು ಗೊತ್ತಿದೆ. ಆದರೆ ಅವರಿಗಲ್ಲಿ ಔಷಧಿಗಳ ಮಾಹಿತಿಯನ್ನೂ ನೀಡುವಂತಾಗಬೇಕು. ಅವರು ತಮ್ಮೂರಿನಲ್ಲಿ ಉಪಯೋಗ ಮಾಡುವಂತಾಗಬೇಕು ಎಂದರು. ಆಗ ಜೊಕಬ್ "ಇಡೀ ಭಾರತದ ವಿಚಾರವಾಗಿ ನೀವು ಮಾತನಾಡುವಿರೋ ಅಥವಾ ಪ್ರಾಂತ್ಯದ ಬಗ್ಗೆಯೋ" ಎಂದು ಸ್ವಲ್ಪ ಖಾರವಾಗಿಯೇ ಪ್ರಶ್ನಿಸಿದರು.

ಈ ಪ್ರಶ್ನೆಗೆ ರಮಾಬಾಯಿಯು, ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿ ಕೂಡ ತನ್ನ ಸ್ತ್ರೀ ಶಿಕ್ಷಣದ ಧ್ಯೇಯವನ್ನು ಯಾರು ಸಾಧಿಸಿದ್ದರೋ, ಈ ಬಗ್ಗೆ ಶಾಸ್ತ್ರಾಧಾರ ಕೊಟ್ಟು ಪಂಡಿತ ಸಭೆಯಲ್ಲಿ ವಾದ ಮಾಡಿದರೋ, ಸ್ತ್ರೀ ಶಿಕ್ಷಣದ ಧ್ಯೇಯ ಸಾಧನೆಗಾಗಿ ಯಾರು ಅನೇಕ ಕಷ್ಟಗಳನ್ನು ಅನುಭವಿಸಿದ್ದರೋ ಅಂಥ ಅನಂತಶಾಸ್ತ್ರಿಗಳ; ತನ್ನ ಕಷ್ಟಗಳಿಗೆ ಹೆಗಲಾದ ಅಣ್ಣ ಶ್ರೀನಿವಾಸ. ಗಂಡ ಬಿಪಿನ್ ಬಿಹಾರಿದಾಸ್ ಇವರೆಲ್ಲರ ಸ್ತ್ರೀ ಶಿಕ್ಷಣದ ಕುರಿತ ಅಭಿಪ್ರಾಯಗಳ ಮೇಲಿಂದ ಹಾಗೂ ತನಗೆ ಸಿಕ್ಕಿದ ದೇಶಸಂಚಾರದ ಅನುಭವದಿಂದ, ತನ್ನ ಅಧ್ಯಯನದ ಬಲದಿಂದ ಭಾರತದ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡುತ್ತಿದ್ದೇನೆ ಎಂದು ಹೇಳಿ ಅವರ ಬಾಯ್ಮುಚ್ಚಿಸಿದರು.

ಹಂಟರ್ ಸಮಿತಿ ಎದುರಿಗೆ ರಮಾಬಾಯಿ ತನ್ನೆಲ್ಲ ಸಾಕ್ಷಿಗಳನ್ನು ಮರಾಠಿ ಭಾಷೆಯಲ್ಲಿ ಸ್ಪಷ್ಟವಾಗಿ ಆರುಹಿದಳು. ಸಮಿತಿಯ ಹಂಟರ್‌ನು ಇದನ್ನು ಮೆಚ್ಚಿ ಇಂಗ್ಲಿಷ್‌ಗೆ

ತರ್ಜುಮೆ ಮಾಡಿಸಿ, ಮುದ್ರಿಸಿದನು. ಆನಂತರ ಇಂಗ್ಲೆಂಡಿನಲ್ಲಿ "ಎಡಿನ್ ಬರೋ"ದಲ್ಲಿ ಸಭೆ ಕರೆಸಿ, ರಮಾಬಾಯಿ ಹಾಗೂ ಆಕೆಯ ಕರ್ತವ್ಯಪರತೆ ಹಾಗೂ ವೈಚಾರಿಕ ಸಿರಿವಂತಿಕೆ ಬಗ್ಗೆ ವಿವರಿಸಿದನು. ಅಲ್ಲಿ ನೆರೆದವರೆಲ್ಲ ಎದ್ದು ನಿಂತು, ಗೌರವ ಸೂಚಿಸಿದರು. ಇದು ವಿಕ್ಟೋರಿಯಾ ರಾಣಿಯವರೆಗೂ ತಲುಪಿ, ಭಾರತದ ಸ್ತ್ರೀಯರಿಗೆ ವೈದ್ಯಕೀಯ ಶಿಕ್ಷಣವು ಆರಂಭವಾಗುವಂತೆ ಚಾಲನೆ ಕೊಟ್ಟಳು. ಅದರಂತೆ ೧೮೮೫ರಲ್ಲಿ ಲಾರ್ಡ್ ಡಫ್ರೀನ್ ಇಲ್ಲಿ ವೈಸ್ರಾಯ್ ಆಗಿದ್ದಾಗ, ಅವನ ಪತ್ನಿ, ವಿಕ್ಟೋರಿಯಾ ರಾಣಿಯ ಪ್ರೋತ್ಸಾಹದಿಂದ ಹೆಂಗಸರಿಗಾಗಿ ಡಫರೀನ್ ದವಾಖಾನೆ ಆರಂಭಿಸಿದಳು.

ದಿಟ್ಟತನ, ಪಾಂಡಿತ್ಯ, ಕಷ್ಟ ಸಹಿಷ್ಣುತೆ ಎಲ್ಲವೂ ರಮಾಬಾಯಿಯ ಜೀವನದ ಸಾಧನೆಯ ಮೆಟ್ಟಿಲುಗಳಾದವು. ವಿಧವಾ ಪಟ್ಟ ಜೀವನದ ಕೊನೆ ಎನಿಸಲಿಲ್ಲ. ಅಲ್ಲಿಂದಲೇ ಸಂಪೂರ್ಣವಾಗಿ ಭಾರತದ ಸಮಾಜದ ಎಲ್ಲ ಮಹಿಳೆಯರನ್ನು ಬೆಳಕಿನೆಡೆಗೆ ಒಯ್ಯುವ ಹರ ಸಾಹಸ ರಮಾಬಾಯಿಯದಾಯಿತು. ಆತ್ಮವಿಶ್ವಾಸಕ್ಕೆ ಇನ್ನೊಂದು ಹೆಸರು ರಮಾಬಾಯಿ ಎಂಬಂತಾಗಿ ಹೋಯಿತು.

## ಇಂಗ್ಲೆಂಡ್‌ಗೆ ಪಯಣ

ರಮಾಬಾಯಿಗೆ ಭಾರತದ ಸಮಗ್ರ ವಿದ್ಯಾರೇಖೆಯ ಅರಿವಿತ್ತು. ಕೇವಲ ತನ್ನೊಬ್ಬಳ surveyಯಿಂದ ವಾದ ಮಂಡಿಸಿರಲಿಲ್ಲ. ೧೮೮೧ರ ಗಣತಿಯ ಸಮಗ್ರ ಚಿತ್ರಣ ಅವಳ ಮುಂದಿತ್ತು. ಹಾಗೇ ಬಾಲವಿಧವೆಯರ ಸಂಖ್ಯೆಯ ಬಗ್ಗೆ ಬಹಳ ಖೇದವಿತ್ತು. ಆಗ ಭಾರತದಲ್ಲಿ ಸ್ತ್ರೀ ವಿದ್ಯಾಭ್ಯಾಸದ Ratio ೫೩೦:೧ ಆಗಿತ್ತು. ೫ರಿಂದ ೯ ವರ್ಷದ ಬಾಲ ವಿಧವೆಯರು ೫೧,೮೭೫ ಹಾಗೂ ४ ವರ್ಷದೊಳಗಿನ ಬಾಲವಿಧವೆಯರ ಸಂಖ್ಯೆ ೧೦,೧೩೫ ಆಗಿತ್ತು! ಎಂಥ ಶೋಚನೀಯ ಸ್ಥಿತಿ. ಆದರೆ ಅದರ ಬಗ್ಗೆ ಯೋಚನೆ ಮಾಡುವವರಾರೂ ಇರಲಿಲ್ಲ. ಇದೇ ನಮ್ಮ ಬದುಕಿನ ರೀತಿ ಎಂಬಂತೆ ಒಪ್ಪಿಕೊಂಡಂತಾಗಿತ್ತು. ಆದರೆ ರಮಾಬಾಯಿ ಬಾಲವಿಧವೆಯರ ಭವಿಷ್ಯದ ಕುರಿತು ದೀರ್ಘವಾಗಿ ಯೋಚನೆಗೆ ಒಳಗಾದರು. ಅವರಿಗೆ ಶಿಕ್ಷಣ ಕೊಡುವಂತಹ ಒಂದು ಸಂಸ್ಥೆ ಸ್ಥಾಪಿಸಬೇಕೆಂಬುದಾಗಿ ಮುಂಬೈ ಅಹಮದಾಬಾದ್ ಮುಂತಾದೆಡೆ ಅನೇಕರನ್ನು ಭೇಟಿ ಮಾಡಿ ವಿಷಯ ಮುಂದಿಟ್ಟರು. ಬಾಲ ವಿಧವೆಯರ ಬದುಕು ಕುಟುಂಬದೊಳಗೆ, ಸಮಾಜದೊಳಗೆ ಬಹಿಷ್ಕೃತ ಬದುಕಾಗುವುದು ಇವರಿಗೆ ಅಸಹನೀಯ ಸಂಗತಿ. ಅವರ ವ್ಯಕ್ತಿತ್ವದ ಪತನ ಮಾಡುವುದು. ಕೇಶ ಮುಂಡನವೇ ಮುಂತಾದ ಪದ್ಧತಿಗಳೇ ಅವಳ ರಕ್ಷಣೆಯ ಕ್ರೂರ ಸತ್ಯಗಳಾಗುವ ದೃಶ್ಯ ರಮಾಬಾಯಿಯ ಅಂತಃಸ್ಥೈರ್ಯವನ್ನು ಕೆಣಕಿದವು. ಆದರೆ ಯಾವೊಬ್ಬ ವ್ಯಕ್ತಿಯೂ ಸಹಾಯಕ್ಕೆ ಬರುವುದಿರಲಿ ಅಂಥವರಿಂದ ಇಂಥ ಒಂದು ಯೋಜನೆಯೇ ಅರ್ಥವಿಲ್ಲದ್ದು ಹಾಗೂ ನಿಷ್ಪ್ರಯೋಜಕ ಎಂಬ ಉತ್ತರ ಸಿಕ್ಕಿತು! ಒಬ್ಬ ಮಹನೀಯರು ಹತ್ತುಸಾವಿರ ತಾನು ಕೊಟ್ಟರೆ,

ನೀವು ೪೦,೦೦೦ ಹಾಕಿ, ವಿಧವಾ ಆಶ್ರಮ ಸ್ಥಾಪಿಸಿ ತೋರಿಸಿಕೊಡಿ ಎಂದು ಸವಾಲು (challenge) ಮಾಡಿದರು. ಆದರೆ, ಆಗಿನ ಪರಿಸ್ಥಿತಿಯಲ್ಲಿ ರಮಾಬಾಯಿಗೆ ಇದು ಬಹುದೊಡ್ಡ ಮೊತ್ತ ಹಾಗೂ ಅಸಾಧ್ಯವೂ ಆಗಿತ್ತು. ಇದರಿಂದ ಒಮ್ಮೆ ರಮಾಬಾಯಿ ನಿರಾಶರಾದಳು.

ಅದೇ ಸಮಯದಲ್ಲಿ ೧೨ ವರುಷದ ಬಾಲೆಯೊಬ್ಬಳು ವಿಧವೆಯಾದಾಗ ತಾನು ಅವಳ ರಕ್ಷಣೆ ಹೊರಬೇಕಾದ ಸಂದರ್ಭ ಬಂತು. ೫ನೇ ವರ್ಷಕ್ಕೆ ಮದುವೆಯಾಗಿದ್ದ ಈ ಹುಡುಗಿ ಗಂಡನ ಸಾವಿಗೆ ಕಾರಣಳು ಎಂಬ ಭಾವನೆಯಿಂದ ಮನೆಯಲ್ಲಿ, ನೆರೆಹೊರೆಯವರಿಂದ ತಿರಸ್ಕಾರಕ್ಕೆ ಒಳಗಾಗಿದ್ದಳು. ಇದರಿಂದ ಆಗಲೇ ಇವಳು ಕ್ಷೀಣವಾಗಿದ್ದಳು. ರಮಾಬಾಯಿಗೆ ಈಕೆಯ ಬಗೆಗೆ ಕನಿಕರವುಂಟಾಯಿತು. ಪರಿಸ್ಥಿತಿಯ ದರ್ಪಣ ಮತ್ತೊಮ್ಮೆ ರಮಾಬಾಯಿಯನ್ನು ವಿಧವಾ ಆಶ್ರಮದ ಯೋಜನೆಯ ಕಡೆ ತಿರುಗುವಂತೆ ಮಾಡಿತು. ತಾನು ಇಂಗ್ಲಿಷ್ ಕಲಿತು, ವೈದ್ಯಕೀಯ ಶಿಕ್ಷಣ ಪಡೆದು ಇದಕ್ಕೊಂದು ಪರಿಹಾರ ಕಾಣಿಸಬೇಕೆಂದು ಅವಳ ನಿರ್ಧಾರವಾಗಿತ್ತು. ಆದರೆ ಆಗಿನ ಶಿಕ್ಷಣ ಪದ್ಧತಿಯಲ್ಲಿ ತಾನು ಲಂಡನ್ನಿಗೆ ಹೋಗಿಯೇ ಶಿಕ್ಷಣ ಪಡೆದು ಬಂದರೆ ಒಳಿತು ಅನ್ನುವ ಆಶಯ ಅವಳಲ್ಲಿ ಬಲಿಯಿತು. ಮುಂದೆ ವೈದ್ಯೆ ಆಗದಿದ್ದರೂ, ಶಿಕ್ಷಣ ತಜ್ಞೆ ಆಗುವ ಮುನ್ಸೂಚನೆಗಳು ಬಾಲ್ಯದಲ್ಲೇ ಕಾಣಿಸಿಕೊಂಡಿದ್ದವಲ್ಲ? ಅಲ್ಲದೆ ಲಂಡನ್ನಿನ ವಾತಾವರಣ ತನಗೆ, ಓದಿಗೆ ಅನುಕೂಲಕರವಾಗಬಹುದು. ಎನ್ನುವ ವಿಶ್ವಾಸ ಬೇರೆ. ಈ ಮೊದಲು "ಸ್ತ್ರೀ ಧರ್ಮನೀತಿ" ಎಂಬ ಮರಾಠಿ ಪುಸ್ತಕದ ಮಾರಾಟದಿಂದ ಸ್ವಲ್ಪ ಹಣವೂ ಬಂದಿತ್ತು. ಹೀಗಾಗಿ, ಯಾವ ಅಡಚಣೆಗಳನ್ನೂ ಲೆಕ್ಕಿಸದೆ, ಪಂ. ರಮಾಬಾಯಿ ತನ್ನ ಎರಡು ವರ್ಷದ ಮಗಳಾದ ಮನೋರಮೆಯ ಸಹಿತ ೧೮೮೩ನೇ ಇಸವಿಯ ಎಪ್ರಿಲ್ ೨೬ರಂದು ಸಂಜೆ ನಾಲ್ಕು ಘಂಟೆಗೆ "ಬುಖಾರಾ" ಬೋಟ್‌ನಲ್ಲಿ ಮುಂಬೈನಿಂದ ಹೊರಟು ಮೇ ೧೭ನೇ ತಾರೀಕಿಗೆ ಇಂಗ್ಲೆಂಡಿಗೆ ತಲುಪಿದಳು.

ಇಂಗ್ಲೆಂಡ್‌ನಲ್ಲಿ "ವಾಂಟೇಜ್ ಕಾನ್ವೆಂಟ್"ನ ಸಿಸ್ಟರ್ಸ್ ಸ್ನೇಹಪೂರ್ವಕವಾಗಿ ರಮಾಬಾಯಿಯನ್ನು ಸ್ವಾಗತಿಸಿದರು. Vantage ಎಂಬುದು Oxfort ಜಿಲ್ಲೆಯ Burkshire ತಾಲೂಕಿನ ಪಟ್ಟಣವಾಗಿತ್ತು. ಪೂನಾದಲ್ಲಿದ್ದಾಗಲೇ Miss Hurfurd ಭಗಿನೀ ಸಮಾಜದಲ್ಲಿ ಒಬ್ಬಾಕೆಯ ಪರಿಚಯವನ್ನು "St. Marries Home"ನಲ್ಲಿ ಮಾಡಿದ್ದಳು. ಹಾಗಾಗಿ ಭಗಿನೀ ಸಮಾಜವು ಪಂ. ರಮಾಬಾಯಿ ಹಾಗೂ ಮನೋರಮೆಯನ್ನು ವಾಂಟೇಜ್‌ಗೆ ಕರೆದು ಅಲ್ಲಿ ಹೋದೊಡನೆಯೇ ರಮಾಬಾಯಿ, ಇಂಗ್ಲೆಂಡ್‌ನಿಂದ ಭಾರತಕ್ಕಾಗಮಿಸುವ ಕನ್ಯಾ, ಸ್ತ್ರೀಯರಿಗೆ ಮರಾಠಿ ಭಾಷೆ ಕಲಿಸ ತೊಡಗಿದರು. ಇದಕ್ಕೆ ಪ್ರತಿಯಾಗಿ ಭಗಿನೀ ಸಮಾಜವು ಊಟ, ವಸತಿಗಳ ಖರ್ಚಿಗೆ ಬೇಕಾದ ವೇತನವನ್ನು ಪಂ. ರಮಾಬಾಯಿಗೆ ಕೊಡುತ್ತಿದ್ದರು. ಹಾಗೇ ಮುಂದೆ ಸಿಸ್ಟರ್ ಜೆರಾಲ್ಡಿನ್ ಎಂಬವಳು ಇಂಗ್ಲಿಷನ್ನೂ, ಧಾರ್ಮಿಕ ಶಿಕ್ಷಣವನ್ನೂ ಕೊಡಲಾರಂಭಿಸಿದಳು. ಹಾಗಾಗಿ ರಮಾಬಾಯಿಗೆ ಸಿಸ್ಟರ್ ಜೆರಾಲ್ಡಿನ್ "ಆಧ್ಯಾತ್ಮಿಕ ಮಾತೆ" ಆಗಿ ಬಿಟ್ಟದ್ದಳು. ಶಿಸ್ತು, ಅಚ್ಚುಕಟ್ಟುತನ, ಸಮಯಕ್ಕೆ

ಸರಿಯಾಗಿ ಕೆಲಸ ಮಾಡುವುದು ಇವೆಲ್ಲ ಗುಣಗಳನ್ನು ಜೆರಾಲ್ಡೀನ್‌ಳಿಂದ ಕಲಿತೆ ಎಂಬುದಾಗಿ ಹೆಮ್ಮೆಯಿಂದ ರಮಾಬಾಯಿ ಹೇಳಿಕೊಳ್ಳುತ್ತಿದ್ದರು. ಹೀಗೆ ವಾಂಟೇಜ್ ಭಗಿನೀ ಸಮಾಜದಲ್ಲಿ ಒಂದು ವರ್ಷ ರಮಾಬಾಯಿಯವರ ಇಂಗ್ಲಿಷ್ ವಿದ್ಯಾಭ್ಯಾಸ ಸಾಗಿತು.

ಈ ಸಮಯದಲ್ಲಿ ಕ್ರೈಸ್ತಮತ ಸಿದ್ಧಾಂತಗಳ ನಿಶ್ಚಯ ಸ್ವರೂಪವನ್ನು ತುಲನಾತ್ಮಕವಾಗಿ ಬರೆದ ಕ್ರೈಸ್ತಮತ ಗ್ರಂಥಗಳನ್ನೂ ತಿಳಿದುಕೊಂಡರು. ಸುಪ್ರಸಿದ್ಧ ಕ್ರೈಸ್ತ ಧರ್ಮ ಬೋಧಕರ ಉಪನ್ಯಾಸಗಳನ್ನೂ ಕೇಳಿದರು. ಹೀಗೆ ಅವರ ಮನಸ್ಸು ಕ್ರೈಸ್ತ ಧರ್ಮದೆಡೆಗೆ ಆಕರ್ಷಿಸಲ್ಪಟ್ಟಿತು. ಬಹುಶಃ ಸ್ತ್ರೀ ಜಾತಿಯ ಉದಾರವಾದ ವರ್ತನೆ ಹಾಗೂ ಬೋಧನೆ, ಇದರಿಂದಲೂ ರಮಾಬಾಯಿ ಕ್ರೈಸ್ತ ಧರ್ಮದೆಡೆಗೆ ವಾಲುವಂತಾಯಿತು. ಅಲ್ಲಿರುವಾಗ, ಲಂಡನ್‌ನ ಅನಾಥಾಶ್ರಮ (Rescue Homes)ಗಳನ್ನು ವೀಕ್ಷಿಸಿ ನಿಜವಾಗಿಯೂ ಅಚ್ಚರಿಪಟ್ಟರು ರಮಾಬಾಯಿ. ಅಲ್ಲಿಯ ಅನಾಥಾಲಯಗಳಲ್ಲಿ ಪತಿತಗೊಂಡ ಸ್ತ್ರೀಯರು ಪುನರ್ಜನ್ಮ ಪಡೆದವರಂತೆ ಉಲ್ಲಾಸದಿಂದಲೂ, ಸಂತೋಷವಾಗಿಯೂ ಇರುತ್ತಿದ್ದರು. ಅಲ್ಲಿಯ ದಯಾಶೀಲತೆಯುಳ್ಳ ಕೆಲಸ ನೋಡಿ ನಾವೆಲ್ಲಿ ಹಿಂದಿದ್ದೇವೆ ಎಂಬುದನ್ನು ತಿಳಿದುಕೊಂಡರು. ಅಪರಾಧಿಗಳೆನಿಸಿಕೊಂಡವರ ವಿಚಾರದಲ್ಲಿ ಕ್ಷಮಾಶೀಲತೆ, ಅವರ ಉದ್ಧಾರದ ಆಸೆ, ಕ್ರಿಸ್ತನ ಈ ಉದಾತ್ತ ಗುಣಗಳೆಲ್ಲ ಅಳವಡಿಸಿಕೊಳ್ಳಲು ಉತ್ಸುಕರಾದರು ರಮಾಬಾಯಿ.

ತನ್ನ ಬಾಲ್ಯದ ಕೆಲ ಕಹಿ ಘಟನೆಗಳು – ಧರ್ಮದ ಹೆಸರಲ್ಲಿ ಆಗುವ ಅನಾಚಾರ ಗಳೆಲ್ಲವನ್ನೂ ಕಂಡಿದ್ದ ರಮಾಬಾಯಿಗೆ, ಹಿಂದೂ ವಿಧವೆಯರು ಸಮಾಜದಲ್ಲಿ ಪಡುತ್ತಿದ್ದ ಪಾಡನ್ನೆಲ್ಲ ನೋಡಿದ್ದ ರಮಾಬಾಯಿಗೆ ತಾನು ಕ್ರೈಸ್ತಳಾಗುವ ನಿರ್ಧಾರ ದೃಢವಾಯಿತು. ೨೯.೯.೧೮೮೩ರಂದು ರಮಾಬಾಯಿ ಮಗಳೊಂದಿಗೆ 'ಕೆನನ್ ಬಟ್ಲರ್' ನೇತೃತ್ವದಲ್ಲಿ ಕ್ರಿಶ್ಚಿಯಾನಿಟಿಗೆ ಪರಿವರ್ತನೆಗೊಂಡರು. ಸಿಸ್ಟರ್ ಜೆರಾಲ್ಡಿನ್ ಕೂಡ ಅಲ್ಲಿದ್ದು ಸಾಕ್ಷಿ ಯಾದರು. ಅನಂತರ ರಮಾಬಾಯಿ ಮೇರಿ ಎನಿಸಿದರು. ಆದರೆ ತನ್ನ ರಮಾಬಾಯಿ ಹಾಗೂ ಮಗಳ ಮನೋರಮೆ ಹೆಸರುಗಳನ್ನು ವ್ಯಾವಹಾರಿಕವಾಗಿ ಹಾಗೇ ಇಟ್ಟುಕೊಂಡಿದ್ದರು.

ವಾಂಟೇಜಿನ ಭಗಿನೀ ಸಮಾಜದಲ್ಲಿ ಒಂದು ವರ್ಷದವರೆಗೆ ಪಂ. ರಮಾಬಾಯಿ ಇಂಗ್ಲಿಷ್‌ನಲ್ಲಿ ಶಿಕ್ಷಣ ಪಡೆದರು. ಮುಂದೆ ಮನೋರಮೆಯ ಜವಾಬ್ದಾರಿಯನ್ನು ಸಿಸ್ಟರ್ ಜೆರಾಲ್ಡಿನ್ ವಹಿಸಿಕೊಂಡು ಇನ್ನೂ ಹೆಚ್ಚಿನ ಶಿಕ್ಷಣಕ್ಕಾಗಿ "ಚೆಲ್ಟನ್ ಹ್ಯಾಮ್" ಎಂಬಲ್ಲಿನ ವಿಮೆನ್ಸ್ ಕಾಲೇಜು ಸೇರಿದರು. ಅಲ್ಲಿ ವಿದ್ಯಾರ್ಥಿನಿಯರಿಗೆ ಸಂಸ್ಕೃತವನ್ನು ಕಲಿಸುತ್ತಿದ್ದರಲ್ಲದೆ ತಾನು ಇಂಗ್ಲಿಷ್, ವಿಜ್ಞಾನ, ಗಣಿತ ವಿಷಯಗಳಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಅಲ್ಲಿಯವರಿಗೆ ಸಂಸ್ಕೃತ ಕಲಿಸುತ್ತಿದ್ದ ಕಾರಣ ರಮಾಬಾಯಿಗೆ ತನ್ನ ಖರ್ಚಿಗೆ ಬೇಕಾದಷ್ಟು ವೇತನ ದೊರೆಯುತ್ತಿತ್ತು. ರಮಾಬಾಯಿಗೆ ಕಿವಿ ಸರಿಯಾಗಿ ಕೇಳಿಸುತ್ತಿರಲಿಲ್ಲ. ಅಲೆದಾಟದಲ್ಲಿ ಜೇಲಮ್ ನದಿ ದಂಡೆ ಪ್ರದೇಶದ ಥಂಡಿಗೆ ಅವರು ಇನ್ನಷ್ಟು ಕಿವುಡರಾಗಬೇಕಾಯಿತು. ಅದನ್ನು ಅವರು ಜೀವನ ವಿಡೀ ಅನುಭವಿಸುವಂತಾಯಿತು. ಆದ್ದರಿಂದಲೇ ಕಾಲೇಜಿನಲ್ಲಿ ನಡೆಯುತ್ತಿದ್ದ

ಭಾಷಣಗಳನ್ನು ಹೆಚ್ಚು ಹತ್ತಿರದಿಂದ ಕೇಳಬೇಕಾಗುತ್ತಿತ್ತು. ಪ್ರತಿ ಶನಿವಾರ ಮಿಸ್ ಬಿಲ್ ಎಂಬವಳು ಬೈಬಲ್ ಮೇಲೆ ವ್ಯಾಖ್ಯಾನ ಮಾಡುತ್ತಿದ್ದರು. ಆಕೆ "ಯೋಹಾನನ ಶುಭ ವರ್ತಮಾನ'ದ ಒಂದನೇ ಅಧ್ಯಾಯದ ಆರಂಭದ ಎಂಟು ವಚನಗಳ ಮೇಲೆ ಕೊಟ್ಟ ಉಪನ್ಯಾಸಗಳು ರಮಾಬಾಯಿಯ ಮೇಲೆ ಆಳವಾದ ಪರಿಣಾಮವನ್ನು ಉಂಟುಮಾಡಿದ್ದವು. ೧೮೮೬ರ ವರೆಗೆ "ಚೆಲ್ಟನ್ ಹ್ಯಾಮ್" ಕಾಲೇಜಿನಲ್ಲಿ ರಮಾಬಾಯಿಯ ಶಿಕ್ಷಣ ಅವ್ಯಾಹತವಾಗಿ ಸಾಗಿತು. ಈಗ ಮನೋರಮೆಯ ಸಾಕಣೆಯ ಭಾರವನ್ನು ವಾಂಟೇಜದ ಭಗಿನೀ ಸಮಾಜ ವಹಿಸಿಕೊಂಡಿತ್ತು.

ಈಗ ರಮಾಬಾಯಿ ಕೀರ್ತಿ ಇಂಗ್ಲೆಂಡಿನಿಂದ ಅಮೇರಿಕಕ್ಕೆ ಮುಟ್ಟಿತು. ಫಿಲಡೆಲ್ಫಿಯಾ ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲಳಾದ "ಡಾ. ರೇಚೆಲ್ ಬಾಡ್ಲೆ" ರಮಾಬಾಯಿಯಿಂದ ಪ್ರಭಾವಿತಳಾಗಿ ಅವಳನ್ನು ಹೇಗಾದರೂ ಮಾಡಿ ಅಮೇರಿಕಕ್ಕೆ ಕರೆಸುವ ಬಗ್ಗೆ ಉತ್ಸಾಹ ತೋರಿದಳು. ಇದಕ್ಕೆ ತಕ್ಕ ಕಾರಣವೂ ಸಿಕ್ಕಿತು. ಅಲ್ಲಿ ಭಾರತದ ಪ್ರಥಮ ವೈದ್ಯೆ ಎನಿಸಿದ ಡಾ. ಆನಂದಿ ಬ್ಯಾ ಜೋಶಿ ಆಗಷ್ಟೇ ಮೆಡಿಕಲ್ ವಿದ್ಯಾಭ್ಯಾಸ ಪೂರೈಸಿದ್ದಳು. ಇವಳ ಪದವಿ ಪ್ರದಾನ ಕಾರ್ಯಕ್ರಮ ೧೮೮೬ರಲ್ಲಿ ನಡೆಯಬೇಕಾಗಿತ್ತು. ರಮಾಬಾಯಿ ಇಂಗ್ಲೆಂಡಿಗೆ ಹೋದ ಭಾರತೀಯ ಪ್ರಥಮ ಮಹಿಳೆ ಎನಿಸಿದರೆ, ಡಾ. ಆನಂದಿ ಬಾಯಿ ಅಮೇರಿಕಕ್ಕೆ ತೆರಳಿ ಶಿಕ್ಷಣಗೈದ ಪ್ರಥಮ ಭಾರತೀಯ ಮಹಿಳೆ ಎನಿಸಿಕೊಂಡರು. ಇಬ್ಬರೂ ವಿದೇಶಕ್ಕೆ ಒಂದೇ ವರ್ಷದಲ್ಲಿ ತೆರಳಿದ್ದರು. ಹಾಗೆ ನೋಡಿದರೆ ಡಾ. ಆನಂದಿಬಾಯಿ ರಮಾಬಾಯಿಗೆ ದೂರದ ಸಂಬಂಧಿಯೂ ಆಗಿದ್ದಳು.

ಡಾ. ಆನಂದಿಬಾಯಿ ಜೋಶಿ ಭಾರತದ ಪ್ರಥಮ ವೈದ್ಯೆ ಅಂದೆನಷ್ಟೇ. ಇವಳ ಪತಿ ಗೋಪಾಲರಾವ್ ಜೋಶಿ ಬಡ ಪೋಸ್ಟ್ ಮಾಸ್ತರರಾಗಿದ್ದವರು. ಆದರೂ ಸ್ತ್ರೀ ಶಿಕ್ಷಣದ ಬಗ್ಗೆ ಕಾಳಜಿ ಹೊಂದಿದ್ದವರು. ಈ ಸರಕಾರಿ ಮುಂದಾಳುಗಳೆಲ್ಲ ಕೇವಲ ಭಾಷಣಗಳಿಂದಲೇ ಕಾಲ ಕಳೆಯುತ್ತಿದ್ದು ಅವರಿಂದ ಯಾವುದೇ ಜನಪರ ಕೆಲಸಗಳು ನಡೆಯದೇ ಇದ್ದುದನ್ನು ಕಂಡು ಬೇಸರ ಬಂದಿತ್ತು. ತನ್ನ ಪತ್ನಿಗಾದರೂ ಶಿಕ್ಷಣ ಅದರಲ್ಲೂ ವೈದ್ಯಕೀಯ ಶಿಕ್ಷಣ ಕೊಡಿಸಿ ಇತರರಿಗೆ ಮೇಲ್ಪಂಕ್ತಿಯಾಗಿರಬೇಕೆಂದು ಬಯಸಿದ ಈ ಆದರ್ಶವಾದಿ ಗೋಪಾಲರಾವ್ ಜೋಶಿ, ತನ್ನ ಪತ್ನಿಯ ಶಿಕ್ಷಣದ ಸಲುವಾಗಿಯೇ ಕಚ್ಛ್, ಶ್ರೀ ರಾಮಪುರ, ಕಲ್ಕತ್ತಾಗಳಿಗೆ ತನ್ನ ಉದ್ಯೋಗ ವರ್ಗಾವಣೆ ಮಾಡಿಸಿಕೊಂಡರು. ಹಾಗೇ ತನ್ನ ಪರಿಶ್ರಮದಿಂದ ಪತ್ನಿಯನ್ನು ಒಪ್ಪಿಸಿ, ಆಕೆಯನ್ನು ಶಿಕ್ಷಣಕ್ಕಾಗಿ ಅಮೇರಿಕೆಗೆ ಕಳಿಸಿ ತನ್ನ ಬಂಧುಗಳ ಕಟು ಟೀಕೆಗೆ ಒಳಗಾಗಬೇಕಾಯ್ತು ಆದರೂ ಆಕೆಗೆ ಧೈರ್ಯ ತುಂಬಿ ಕಳಿಸಿ, ಮುಂದೆ ಆಕೆಯ ಪದವಿ ಪ್ರದಾನ ಕಾರ್ಯಕ್ರಮಕ್ಕೆ ಹೋಗಲಿಕ್ಕಾಗಿ ಐದು ರೂಪಾಯಿಗಳನ್ನು ಸಾಲವಾಗಿ ಪಡೆದುಕೊಂಡು ಕೂಲಿಗಳನ್ನು ಸಾಗಿಸುವ ಹಡಗಿನಲ್ಲಿ ಅಮೇರಿಕಕ್ಕೆ ತೆರಳಲು ವ್ಯವಸ್ಥೆ ಮಾಡಿಕೊಂಡರು. ೧೮೮೬ರ ಮಾರ್ಚ್ ತಿಂಗಳಂದು ಡಾ. ಆನಂದಿಬಾಯಿ ಜೋಶಿಯ ಪದವಿ ಪ್ರದಾನ

ಕಾರ್ಯಕ್ರಮ ಮಾರ್ಚ್‌ರಂದು ನಿಗದಿಯಾಗಿತ್ತು.

ಪಂಡಿತಾ ರಮಾಬಾಯಿಗೆ ಅಮೇರಿಕಾದಲ್ಲಿ ಆ ಸಮಯದಲ್ಲಿ ಪ್ರತಿಕೂಲ ಹವಾಮಾನ, ಬಿರುಗಾಳಿ ಇರುವ ಕಾರಣ ಸಮುದ್ರದಲ್ಲಿ ಹಡಗು ಪ್ರಯಾಣ ಕ್ಷೇಮಕರ ವಲ್ಲವೆಂದೂ, ಕೆಲವರು ಹೇಳಿದರು. ಅಮೇರಿಕದ ಸುತ್ತಮುತ್ತ ಸುಮಾರು ೨೫ ಕಿ.ಮೀ. ದೂರದವರೆಗಿನ ಸಮುದ್ರ ಗಟ್ಟಿಯಾಗಿತ್ತು. ಹಡಗುಗಳು ಹೀಗೆ ಹೆಪ್ಪುಗಟ್ಟಿದ ಬಂಡೆಗಳಿಗೆ ಹೊಡೆಯುವ ಸಾಧ್ಯತೆಗಳಿದ್ದುವು. ಆದರೂ ರಮಾಬಾಯಿಗೆ ಡಾ. ರೆಚಲ್ ಬಾಡ್ಲೆಯವರ ಆಗ್ರಹಪೂರ್ವ ಆಮಂತ್ರಣವನ್ನು ನಿರಾಕರಿಸಲಾಗಲಿಲ್ಲ. ಕಾಲೇಜಿನ ಶಿಕ್ಷಣದ ಮಧ್ಯದಲ್ಲಿ ಅಮೇರಿಕಕ್ಕೆ ಹೋಗುವ ಬಗ್ಗೆ ಇಚ್ಛೆ ಇರಲಿಲ್ಲವಾದರೂ ಆನಂದಿಬಾಯಿ, ಗೋಪಾಲ ಜೋಶಿ ಇವರ ಆಮಂತ್ರಣವೂ ಅವರಿಗೆ ಅಮೇರಿಕ ಪ್ರವಾಸಕ್ಕೆ ಹೋಗಲು ಪ್ರೇರೇಪಿಸಿದವು. ಅಮೇರಿಕಕ್ಕೆ ಹೋಗಿ ಕೆಲದಿನಗಳಲ್ಲಿ ಹಿಂತಿರುಗುವುದೆಂದು ನಿಶ್ಚಯಿಸಿ ೧೭ ಫೆ. ೧೮೮೬ರಲ್ಲಿ ತನ್ನ ಮಗಳೊಂದಿಗೆ "ಬ್ರಿಟಿಷ್ ಪ್ರಿನ್ಸೆಸ್" ಎಂಬ ಹಡಗಿನಲ್ಲಿ "ಲೆವೆರ್ ಪೂಲ್" ಬಂದರಿನಿಂದ ಅಮೇರಿಕಕ್ಕೆ ಹೊರಟರು ರಮಾಬಾಯಿ.

## ಅಮೇರಿಕಾದಲ್ಲಿ

ಸಮುದ್ರದಲ್ಲಿ ಪ್ರಾಕೃತಿಕವಾಗಿ ಅನುಕೂಲ ವಾತಾವರಣ ಇಲ್ಲದ್ದರಿಂದ "ಬ್ರಿಟಿಷ್ ಪ್ರಿನ್ಸೆಸ್" ಹಡಗಿನಲ್ಲಿ ಹೆಚ್ಚು ಪ್ರಯಾಣಿಕರು ಇರಲಿಲ್ಲ. ಆಗಿನ ಕಾಲದ ಒಂದು ಹಡಗಿನ ಪ್ರವಾಸದ ಚಿತ್ರಣವನ್ನು ಇಲ್ಲಿ ಕೊಡಲೇ ಬೇಕು. ಈ ಹಡಗಿನಲ್ಲಿ ಒಂದನೇ ವರ್ಗದ ಪ್ರಯಾಣಿಕರಲ್ಲಿ ನಾಲ್ಕು ಜನ ಗಂಡಸರು, ಮೂವರು ಹೆಂಗಸರು ಮಾತ್ರ ಇದ್ದರು. ಮೂರನೇ ವರ್ಗದ ಪ್ರಯಾಣಿಕರಲ್ಲಿ ಒಟ್ಟು ೧೯೦ ಜನ ಪ್ರಯಾಣಿಕರಿದ್ದರು. ಇವರೆಲ್ಲ ಧಾರ್ಮಿಕ ಭಾವನೆಯುಳ್ಳ ಜನರಾಗಿದ್ದರು. ಯುರೋಪ್‌ನಲ್ಲಿ ಧಾರ್ಮಿಕ ಆಚರಣೆ ವಿರುದ್ಧದ ಪ್ರತಿಬಂಧಗಳಿಂದ ಬೇಸರಿಸಿ ತಮ್ಮ ಧರ್ಮಾಚರಣೆಗೆ ಪ್ರತಿಬಂಧವಿಲ್ಲದ ಅಮೇರಿಕಾ ದೇಶಕ್ಕೆ ಹೋಗಿ ನೆಲೆಸುವ ಉದ್ದೇಶದಿಂದ ಇವರೆಲ್ಲ ಯುರೋಪಿನಿಂದ ಅಮೇರಿಕಕ್ಕೆ ಹೊರಡುವವರಾಗಿದ್ದರು. ಹಡಗು ಮುಂದೆ ಹೋಗುತ್ತ ಹೋದಂತೆ ಬಿರುಗಾಳಿ ಎದ್ದಿತ್ತು. ರಮಾಬಾಯಿ ಕೂತಿದ್ದ ಕೋಣೆಯ ಕಿಟಕಿಗಳಿಗೆ ಸಮುದ್ರದ ತೆರೆಗಳು ಬಡಿಯಲಾ ರಂಭಿಸಿದವು. ಈ ಶೀತಗಾಳಿಯಿಂದ ಉಸಿರಾಟದ ಸಮಸ್ಯೆ ಆಗಿ, ಕೂತಲ್ಲಿಂದ ಏಳಲೂ ಆಗದ ಪರಿಸ್ಥಿತಿ ಆಗಿತ್ತು. ಹೇಗಾದರೂ ಮಾಡಿ, ಎದ್ದು ಹಡಗಿನ ಮೇಲುಪ್ಪರಿಗೆಯ ಮೇಲೆ ಹೋಗಿ ಒಂದು ಕುರ್ಚಿ ಮೇಲೆ ರಮಾಬಾಯಿ ಕುಳಿತುಕೊಂಡರು. ತುಫಾನನ್ನು ನಿಯಂತ್ರಿಸು ವಂತೆ ಎಲ್ಲ ಪ್ರಯಾಣಿಕರು ದೇವರನ್ನು ಪ್ರಾರ್ಥಿಸಿದರು. ಅಂತೂ ಹಡಗು ಮಾರ್ಚ್ ೬ಕ್ಕೆ ಅಮೇರಿಕದ ದಡ ಸೇರಿತು. ಆಗಲೂ ಹಡಗಿನ ಸುತ್ತ ನೀರು ಗೆಡ್ಡೆ ಕಟ್ಟಿದ್ದರಿಂದ ಹಡಗು ಹೂತುಕೊಂಡಿತು. ಬೇರೆ ದೋಣಿಯ ಸಹಾಯದಿಂದ ಎಲ್ಲರೂ ಫಿಲಡೆಲ್ಫಿಯಾ ದಡಕ್ಕೆ

ಸೇರಿದರು.

ಸೌ. ಆನಂದಿ ಬಾಯಿ ಗೋಪಾಲರಾವ್ ಜೋಶಿ ಇವರು ಬಂದರಿನಲ್ಲಿ ರಮಾಬಾಯಿಯ ನಿರೀಕ್ಷೆಯಲ್ಲಿದ್ದರು. ಡಾ. ಆನಂದಿಬಾಯಿ ಪ್ರಾಕೃತಿಕ ಅಸ್ವಾಸ್ಥ್ಯದಿಂದಲೂ, ಪರೀಕ್ಷೆಯ ಓದುವಿಕೆಯಿಂದಲೂ ಬಳಲಿದ್ದರೂ ಪಂ. ರಮಾಬಾಯಿಯ ಮೇಲಿನ ಆದರ ಭಾವದಿಂದ ಸ್ವತಃ ತಾನೇ ರಮಾಬಾಯಿಯನ್ನು ಸ್ವಾಗತಿಸಲು ಬಂದಿದ್ದಳು.

ಪಂ. ರಮಾಬಾಯಿಯವರನ್ನು ಸ್ವಾಗತಿಸಲೋಸುಗ ಕಾಲೇಜಿನ ಪ್ರಿನ್ಸಿಪಾಲಳಾದ ರೇಚೆಲ್. ಬಾಡ್ಲೆ ಸೌ. ಆನಂದಿ ಬಾಯಿಯವರ ಪದವಿ ಪ್ರದಾನ ಕಾರ್ಯಕ್ರಮದ ಮರುದಿನವೇ ದೊಡ್ಡ ಸಭೆ ಕರೆದಿದ್ದರು. ಜನರಿಗೆ ಸಹಜವಾಗಿ ಭಾರತೀಯ ಮಹಿಳೆಯರ ಬಗ್ಗೆ ಕುತೂಹಲವಿದ್ದುದರಿಂದ ಸಮಾರಂಭದಲ್ಲಿ ಅಧಿಕ ಮಂದಿ ಸೇರಿದ್ದರು. ಅದಕ್ಕಾಗಿಯೇ ಸಮಾರಂಭದ ವೇಳೆ ಪಂ. ರಮಾಬಾಯಿ, ಮನೋರಮಾ ಹಾಗೂ ಸೌ. ಆನಂದಿಬಾಯಿ ಇವರನ್ನು ವೇದಿಕೆಯಲ್ಲಿ ಕುಳ್ಳಿರಿಸಲಾಗಿತ್ತು.

ಸೌ. ಆನಂದಿಬಾಯಿ ಅಮೇರಿಕದಲ್ಲಿಯೂ ಜನಪ್ರಿಯತೆ ಗಳಿಸಿದ್ದಳು. ಇದೇ ಕಾರಣದಿಂದ ಪದವಿ ಪ್ರದಾನ ಸಮಾರಂಭದ ನಂತರ ಆನಂದಿಬಾಯಿಯ ಗೆಳತಿಯರೆಲ್ಲ ಪಂ. ರಮಾಬಾಯಿಯನ್ನು ಸ್ವಾಗತಿಸಿ ಸ್ವಾಗತ-ಸತ್ಕಾರ-ಭೋಜನ ಸಮಾರಂಭವಿಟ್ಟು ಕೊಂಡಿದ್ದರು. ಪ್ರಸಿದ್ಧ ಸ್ಥಳಗಳ ಸಂದರ್ಶನ ಮುಂತಾದುವುಗಳಲ್ಲಿ ಮೂರು ವಾರ ಕಳೆಯಿತು. ಇದೇ ಸಮಯದಲ್ಲಿ ಸಮುದ್ರ ಪ್ರವಾಸ, ಎಡೆಬಿಡದ ಕಾರ್ಯಕ್ರಮಗಳಿಂದಲೂ ಮನೋರಮಾ ಅಸ್ವಸ್ಥಳಾದಳು. ಡಾ. ಆನಂದಿಬಾಯಿಯ ಉಪಚಾರದಿಂದ ಮನೋರಮೆ ಗುಣಮುಖಳಾದಳು.

ಇಂಗ್ಲೆಂಡಿನ ಶಿಕ್ಷಣ ಪೂರ್ಣಗೊಳಿಸಿ ಭಾರತದ ವಿದ್ಯಾ ಇಲಾಖೆಯಲ್ಲಿ ಅಧಿ ಕಾರಿಯಾಗಬೇಕು ಎಂಬ ಆಮಂತ್ರಣ ಹಿಂದೂಸ್ಥಾನ್ ಸರಕಾರದಿಂದ ರಮಾಬಾಯಿಗೆ ಬಂತು. ಕಾಲೇಜು ಶಿಕ್ಷಣವೇನೋ ಅತ್ಯುತ್ತಮವಾಗಿತ್ತು. ಸರಕಾರದ ನೌಕರಿಗಿಂತ ಜನಸೇವೆಯೇ ಮೇಲೆಂಬುದು ರಮಾಬಾಯಿ ಅಭಿಪ್ರಾಯವಾಗಿತ್ತು. ಮನೋರಮೆಯನ್ನು ಮರಳಿ ಇಂಗ್ಲೆಂಡಿನ ವಾಂಟೇಜ್ ಕಾನ್ವೆಂಟ್‌ಗೇ ಕಳಿಸಿ ಭಗಿನೀ ಸಮಾಜದಲ್ಲಿರುವಂತೆ ವ್ಯವಸ್ಥೆ ಮಾಡಿ ರಮಾಬಾಯಿ ಕೆಲಕಾಲ ಅಮೇರಿಕದಲ್ಲಿರಲು ನಿಶ್ಚೈಸಿದರು.

ಭಾರತದಲ್ಲಿ ಮರಳಿನಲ್ಲಿ ಬರೆಯುವಿಕೆ, ಛಡಿಯೇಟು ಪ್ರಯೋಗಗಳಿಂದ ಬೋಧಿಸುವ ಕ್ರಮ ಜಾರಿಯಲ್ಲಿದ್ದಾಗ ಅಮೇರಿಕದಲ್ಲಿ ಒಂದು ಹೊಸ ಶಿಕ್ಷಣ ಕ್ರಮ ಪ್ರಸಾರಕ್ಕೆ ಬಂದಿತ್ತು. ಇದು ಸಹಜವಾಗಿ ಶಿಕ್ಷಣ ತಜ್ಞೆಯಾದ ಪಂ. ರಮಾಬಾಯಿಯ ಮನಸ್ಸನ್ನು ಆಕರ್ಷಿಸಿತು. ಫಿಲಡೆಲ್ಫಿಯಾದ ಬಾಲಶಿಕ್ಷಣ ಪಂಡಿತೆ ಅನ್ನಾಹಾಲೋವೆಲ್ ಎಂಬವಳನ್ನು ರಮಾಬಾಯಿ ಭೇಟಿಯಾದರು. ಅನ್ನ ಹಾಲೋವೆಲ್‌ಳು ರಮಾಬಾಯಿಗೆ ಅಮೇರಿಕದಲ್ಲಿ

ಪ್ರಚಾರದಲ್ಲಿದ್ದ "ಪ್ರಿ ಪ್ರೈಮರಿ ಸ್ಕೂಲ್"ಗಳಿಗೆ ಸಮಾನವಾದ ಕಿಂಡರ್ ಗಾರ್ಡನ್ ಶಿಕ್ಷಣ ಕ್ರಮವನ್ನು ಹೇಳಿಕೊಟ್ಟಳು. ಭಾರತದಲ್ಲಿರುವ ಹೈಸ್ಕೂಲು, ಕಾಲೇಜು ಉಚ್ಚ ಶಿಕ್ಷಣದ ಬಗ್ಗೆ ಇದ್ದ ಧ್ಯೇಯದ ದಿಕ್ಕು ಬದಲಾಯಿತು. ಬಾಲೋದ್ಯಾನ ಶಿಕ್ಷಣದತ್ತ ರಮಾಬಾಯಿ ಮನಸ್ಸು ವಾಲಿತು. ಕೂಡಲೇ ಅಲ್ಲಿಯ ಟ್ರೈನಿಂಗ್ ಕಾಲೇಜು ಒಂದಕ್ಕೆ ಸೇರಿ "ಕಿಂಡರ್ ಗಾರ್ಡನ್" ಶಿಕ್ಷಣವನ್ನು ಕಲಿಯಲಾರಂಭಿಸಿದರು. ಭಾರತದಂತಹ ದೇಶದಲ್ಲಿ ಈ ಶಿಕ್ಷಣ ಪದ್ಧತಿ ಫಲಕಾರಿಯಾಗಬಹುದೆಂದು ನಿರ್ಧರಿಸಿ ಮರಾಠಿ ಭಾಷೆಯಲ್ಲಿ ಬಾಲೋದ್ಯಾನ ಪುಸ್ತಕ ಗಳನ್ನು ಬರೆಯಲಾರಂಭಿಸಿದರು ರಮಾಬಾಯಿ.

ಅಮೇರಿಕದಲ್ಲಿ ಬಾಲೋದ್ಯಾನ ಶಿಕ್ಷಣವನ್ನು ಪ್ರಚಾರಕ್ಕೆ ತಂದ "ಮದರ್ ಆಫ್ ಕಿಂಡರ್ ಗಾರ್ಡನ್" ಆಗಿದ್ದ ಮಿಸ್. ಎಲಿಜಬೆತ್ ಫಿಲಡೊ ೮೬ ವರ್ಷ ವಯಸ್ಸಿನ ಉತ್ಸಾಹದ ಬುಗ್ಗೆಯನ್ನು ರಮಾಬಾಯಿ ಭೇಟಿ ಮಾಡಿದರು. ಈ ಭೇಟಿ ಅವಿಸ್ಮರಣೀಯ ಹಾಗೂ ಉಲ್ಲೇಖನೀಯವಾಗಿತ್ತು. ಹಳೆಸಂಪ್ರದಾಯದ ಜನರ ವಿರೋಧದ ನಡುವೆಯೂ ಕಠಿಣ ಪರಿಸ್ಥಿತಿಯಲ್ಲಿ ಅವಳು ಬಾಲೋದ್ಯಾನದ ಪದ್ಧತಿ ಜಾರಿಗೆ ತಂದವಳು. ಈಕೆಯೊಡನೆ ವಿಚಾರ ವಿನಿಮಯ ನಡೆಸಿ ರಮಾಬಾಯಿ ತನ್ನ ಕಲ್ಪನೆಗೊಂದು ಮೂರ್ತರೂಪ ಕಂಡುಕೊಂಡರು.

ಇಲ್ಲಿಯೇ ರಮಾಬಾಯಿಯವರ ಮುಂದಿನ ಕಾರ್ಯಕ್ರಮ "ಮಿಸ್ ಫ್ರಾನ್ಸಿಸ್ ಬಿಲರ್ಡ್" ಭೇಟಿ. ಈಕೆ ಮದ್ಯಪಾನ ನಿಷೇಧದ ಕಾನೂನನ್ನು ಜಾರಿಗೆ ತಂದವಳು. ಬಿಲರ್ಡ್‌ಗೆ ಈ ವಿಚಾರವಾಗಿ ರಮಾಬಾಯಿ ತುಂಬ ಸಹಕಾರ ಕೊಟ್ಟಳು. ಚಿಕಾಗೋದ ಸುಪ್ರಸಿದ್ಧ ದಿನಪತ್ರಿಕೆಯಾದ ಇಂಟರ್ ಓಶನ್‌ನ ವರದಿಗಾರ ೧೮೮೭ನೇ ದಶಂಬರದಲ್ಲಿ ಪಂ. ರಮಾಬಾಯಿಯನ್ನು ಬಿಲರ್ಡ್ ಮನೆಯಲ್ಲೇ ಸಂದರ್ಶಿಸಿದನು. ಇದೇ ಬಿಲರ್ಡ್ ಮುಂದೆ ಭಾರತಪ ಅನಾಥ ಮಹಿಳೆಯರ ಉದ್ಧಾರಕ್ಕಾಗಿ ಪಂ. ರಮಾಬಾಯಿ ಅಸೋಸಿಯೇಶನ್ ಸ್ಥಾಪನೆಯಾಗುವ ವೇಳೆ ಬಹಳ ಸಹಕಾರ ನೀಡಿದ್ದಳು. ಅಮೇರಿಕದ ವಾಷಿಂಗ್ಟನ್‌ನ ಕೀರ್ತಿಮಹಲಿನಲ್ಲಿ ಬಿಲರ್ಡ್ ಮರಣಾನಂತರ ಅವಳ ಪ್ರತಿಮೆ ಅನಾವರಣ ಗೊಳಿಸಲಾಯಿತು.

ಅಮೇರಿಕಾದ ಬೇರೆಬೇರೆ ಕಡೆ ರಮಾಬಾಯಿಗೆ ಭಾಷಣ ಕೊಡಲು ಎಲ್ಲ ಕಡೆಯಿಂದ ಆಮಂತ್ರಣಗಳು ಬರತೊಡಗಿದವು. 'ಕಂಟಕಿ' ಸಂಸ್ಥಾನದ "ಲೂಡ್ ವಿಲ್"ನಲ್ಲಿ ಅಮೇರಿಕನ್ ಮಹಿಳೆಯರನ್ನೂ ಸಭೆಯಲ್ಲಿ ಅಗ್ರಸ್ಥಾನದಲ್ಲಿ ಕೂರಿಸುವ ಪರಂಪರೆಗೆ ನಾಂದಿ ಹಾಡುವ ಪ್ರಸಂಗವೂ ಬಂತು.

ಪಂ. ರಮಾಬಾಯಿ ಪ್ರಥಮವಾಗಿ ಹೋಗಿದ್ದ "ಫಿಲಿಡೆಲ್ಫಿಯಾ" ಪಟ್ಟಣದಲ್ಲಿ ಪ್ರಥಮ ಮಹಿಳಾ ವೈದ್ಯಕೀಯ ಕಾಲೇಜು ಆರಂಭವಾಗಿತ್ತು. ಅಲ್ಲಿ ಶಿಕ್ಷಣ ಪಡೆದು ಹೊರಗೆ

ಬಂದ ಸ್ತ್ರೀ ಡಾಕ್ಟರ್‌ಗಳ ಮೇಲೆ "ಫಿಲಿಡೆಲ್ಫಿಯಾ ಕಂಟ್ರಿ ಮೆಡಿಕಲ್ ಅಸೋಶಿಯೇಶನ್" ಎಂಬ ಪುರುಷ ಡಾಕ್ಟರರ ಸಭೆಯವರು ಬಹಿಷ್ಕಾರ ಹೂಡಿದ್ದರು. ಸ್ತ್ರೀ ಮೆದುಳಿನ ತೂಕ ಪುರುಷರಿಗಿದ್ದದ್ದಕ್ಕಿಂತ ಕಡಿಮೆ ಇರುವುದರಿಂದ ವೈದ್ಯಕೀಯದಂಥ ಗಹನ ವಿಚಾರದಲ್ಲಿ ಬೇಕಾದಷ್ಟು ಪ್ರವೀಣತೆ ಅವರಿಗೆ ಬರಲಾರದು ಎಂಬ ಭಾವನೆಗಳಿದ್ದವು. ಸ್ತ್ರೀ ವೈದ್ಯರ ಸಮರ್ಥವಾದ ಸೇವೆಯ ಅನುಭವ ಬಂದ ಮೇಲೆಯೇ ಬಹಿಷ್ಕಾರ ತೆಗೆಯಲಾಯಿತು.

ರಮಾಬಾಯಿ ಅಮೇರಿಕದಲ್ಲಿ ತನ್ನ ಧ್ಯೇಯೋದ್ದೇಶಗಳ ಸಲುವಾಗಿ ಮೂವತ್ತು ಸಾವಿರ ಮೈಲುಗಳಷ್ಟು ಪ್ರವಾಸವನ್ನು ಮಾಡಿ ಅಲ್ಲಿಯ ಸಾರ್ವಜನಿಕ ಜೀವನ, ಗೃಹಜೀವನ, ವಿದ್ಯಾಪ್ರಸಾರ, ಧಾರ್ಮಿಕ ವಿಷಯ, ಸ್ತ್ರೀಯರ ಪ್ರಗತಿ, ವ್ಯಾಪಾರ ಉದ್ಯೋಗ, ದಾನಧರ್ಮ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದರು. ತನ್ನ ಪ್ರವಾಸದಲ್ಲಿ ಹೆಚ್ಚು ಕಷ್ಟ ಅನುಭವಿಸ ಬೇಕಾಗಿ ಬಂತು. ಬೇರೆ ಬೇರೆ ರಾಜ್ಯಗಳ ಬೇರೆ ಬೇರೆ ಹವಾಗುಣ, ಪ್ರವಾಸದ ಬಳಲಿಕೆ, ಸಸ್ಯಾಹಾರದ ಕೊರತೆ, ಇದನ್ನೂ ಅನುಭವಿಸಬೇಕಾಯಿತು. ಮಾಂಸಾಹಾರವೇ ಪ್ರಧಾನ ವಾಗಿರುವ ಎಷ್ಟೋ ಕಡೆ ಸಸ್ಯಾಹಾರವಾದ ಬರೀ ಆಲೂಗೆಡ್ಡೆ, ಬ್ರೆಡ್, ಬೆಣ್ಣೆ ಇಷ್ಟೇ ಪಂ. ರಮಾಬಾಯಿಯ ಆಹಾರವಾದವು. ಹಿಂದೂ ಧರ್ಮವನ್ನು ಬಿಟ್ಟರೂ ಹಿಂದೂ ಸಂಸ್ಕಾರದಲ್ಲೇ ಬಾಳಿದ ರಮಾಬಾಯಿ ತಾಮಸ ಆಹಾರಗಳನ್ನು ಯಾವತ್ತೋ ವರ್ಜಿಸಿದ್ದರು.

ರಮಾಬಾಯಿಯವರ ಉಜ್ವಲ ಭಾಷಣಗಳು ಬೋಸ್ಟನ್ ಮಂದಿಯಲ್ಲಿ ಅಚ್ಚಳಿಯದಂತಾದುವು. ಅಮೇರಿಕನ್ ಚರಿತ್ರ ಲೇಖಕಿ "ಕ್ಲೆಮೆಟಿನಾ ಬಟ್ಲರ್" ಹೀಗೆ ಬರೆದಿದ್ದಾಳೆ :

"ಬಿಳಿ ಸೀರೆಯುಟ್ಟ, ಕೂದಲನ್ನು ಕುತ್ತಿಗೆವರೆಗೆ ಕತ್ತರಿಸಿದ, ಗಿಡ್ಡ ಗಾತ್ರದ ಅಸಾಧ್ಯ ಮಹಿಳೆ. ಎಳೆವಯಸ್ಸಿನಲ್ಲಿ ವಿವಾಹವಾಗಿ ವೈಧವ್ಯದಂತಹ ಕ್ರೂರಯಾತನೆ ಅನುಭವಿಸುವ ಭಾರತೀಯ ಬಾಲವಿಧವೆಯರ ಕರುಣಾಪೂರ್ಣ ಕಥೆಗಳನ್ನು ಅವರು ಹೇಳುತ್ತಿದ್ದರೆ, ನಾವೆಲ್ಲ ಆ ದೃಶ್ಯಗಳನ್ನು ಅನುಭವಿಸುತ್ತಿದ್ದೆವು."

ಬಟ್ಲರ್ ಜತೆಗೆ ರಮಾಬಾಯಿ ವಿನೋದವನ್ನು ಹಂಚಿಕೊಂಡವರು. ತನ್ನ ಮನೆಗೆ ರಮಾಬಾಯಿಯನ್ನು ಕರೆದು ಪ್ರೀತಿಪೂರ್ವಕವಾಗಿ ಊಟಕ್ಕೆ ತಯಾರಿಸಿದ್ದಳು : ಭಾರತದಿಂದ ತರಿಸಿದ ಮಸಾಲೆಯಿಂದ ಪಲ್ಯ ಮಾಡಿದ್ದಳು. ಇದು ಖಂಡಿತ ರಮಾಬಾಯಿಗೆ ಇಷ್ಟವಾಗುತ್ತದೆಂಬ ಭಾವನೆ. ಆದರೆ ರಮಾಬಾಯಿ ಅದನ್ನು ಸ್ವೀಕರಿಸಲಿಲ್ಲ. ಅವಕ್ಕೆ ಕಾರಣವನ್ನೂ ಕೊಡುತ್ತಾಳೆ. ಒಂದು-ಉಪಯೋಗಿಸಿದ್ದು ಮಸಾಲೆ. ಎರಡನೇಯದು-ಆ ಮಸಾಲೆ ಕೋಳಿಮರಿಯಿಂದ ತಯಾರಾದದ್ದು. ಮೂರನೆಯದು-ಅದರಲ್ಲಿ ಈರುಳ್ಳಿ ಬಳಸಿದ್ದು. ಈರುಳ್ಳಿ ವನಸ್ಪತಿ ತರಕಾರಿಯೆಂದು ಬಟ್ಲರ್ ಉಪಯೋಗಿಸಿದ್ದಳು. ಈಗ ನಗುವ ಸರದಿ ಇಬ್ಬರದೂ ಆಗಿತ್ತು. ಮೂರನೇ ದಿನ ರಮಾಬಾಯಿ ಅಡಿಗೆ ಸರದಿ. ಬಟ್ಲರ್ ವೀಕ್ಷಿಸಿ

ಸಹಜವಾಗಿ ರಮಾಬಾಯಿ ನಿಧಾನವಾಗಿ ಕೆಲಸ ಮಾಡುವವರು. ಮೊದಲು ಬೆಣ್ಣೆಯಿಂದ ತುಪ್ಪ ತಯಾರಿಸಿದರು. ತುಪ್ಪದಲ್ಲಿ ಮಸಾಲೆ ಪದಾರ್ಥವನ್ನು ಹಾಕಿದರು. ಆಮೇಲೆ ಕರಿಮೆಣಸಿನ ಪುಡಿಹಾಕಿ ಪಲ್ಯ ತಯಾರಿಸಿದರು. ಅಮೇರಿಕದ ಈ ಒಂದು ಅಡಿಗೆ ಕ್ರಮ ರಮಾಬಾಯಿಗೆ ಬಹಳ ತೃಪ್ತಿ ನೀಡಿತ್ತು.

ರಮಾಬಾಯಿಯ ಭಾಷಣಗಳಿಂದಾಗಿ ಅಮೇರಿಕದ ಜನರಿಗೆ ಭಾರತದ ಬಾಲವಿಧವೆಯರ ಸ್ಥಿತಿ ತಿಳಿಯಿತು. ಅವರಲ್ಲಿ ಸಹಾನುಭೂತಿ ಮೂಡಿ ಸಹಾಯ ಹಸ್ತ ಕೊಡುವಂತಾಯಿತು. ಪರಿಣಾಮವಾಗಿ "ರಮಾಬಾಯಿ ಎಸೋಸಿಯೇಶನ್" ಸಂಸ್ಥೆ ಆರಂಭವಾಯಿತು. ಬಾಲವಿಧವೆಯರಿಗೆ ಪಾಠಶಾಲೆ ಹಾಗೂ ವಸತಿಗೃಹ ನಿರ್ಮಾಣಕ್ಕಾಗಿ ನಿಧಿ ಸಂಗ್ರಹಿಸಿ ಮುಂದೆ ಹತ್ತು ವರ್ಷದವರೆಗೂ ಧನಸಹಾಯ ಕೊಡುವುದಾಗಿ ಈ ಸಂಸ್ಥೆ ಒಪ್ಪಿಕೊಂಡಿತು. ಡಾ. ರೇಚೆಲ್ ಬಾಡ್ಲೆ ಹಾಗೂ ಫ್ರಾನ್ಸಿಸ್ ಬಿಲಾರ್ಡ್ ಎಂಬವರು ಇದಕ್ಕೆ ಅಡಿಪಾಯ ಹಾಕಿದವರು. ೧೮೮೭ ಡಿಸೆಂಬರ್ ೧೩ರಂದು ರಮಾಬಾಯಿ ಅಸೋಸಿಯೇಶನ್‌ನ ಧ್ಯೇಯೋದ್ದೇಶ ತಿಳಿಸಲೋಸುಗ ಒಂದು ಸಮಾರಂಭ ಏರ್ಪಡಿಸಲಾಯಿತು.

ರಮಾಬಾಯಿಯ ಧ್ಯೇಯೋದ್ದೇಶಗಳ ಸಫಲತೆಗಾಗಿ ಭಾರತ ಹಾಗೂ ಇಂಗ್ಲೆಂಡಿನ ಅನೇಕ ಮಹನೀಯರಿಂದ ಅಂಗೀಕೃತ ಕಾರ್ಯದ ಪುಷ್ಟೀಕರಣಕ್ಕಾಗಿ ಪರಿಚಯ ಪತ್ರಗಳನ್ನು ತರಿಸಲಾಗಿತ್ತು. ರಮಾಬಾಯಿಯವರ ಕಾರ್ಯಗಳನ್ನು ಪುಷ್ಟೀಕರಿಸುವ ಪರಿಚಯ ಪತ್ರಗಳನ್ನು ಕಲೆ ಹಾಕಲಾಗಿತ್ತು ಕೂಡ. ಹಾಗೇ ಬೇರೆ ಬೇರೆ ವಾರ್ತಾಪತ್ರಿಕೆಗಳಲ್ಲಿ ಪ್ರಕಟವಾದ ಅಭಿಪ್ರಾಯಗಳನ್ನೂ ಒಟ್ಟುಗೂಡಿಸಿದ್ದರು. ಇದರಿಂದಲೇ ನಮಗೊಂದು ಸತ್ಯ ವೇದ್ಯವಾಗುತ್ತದೆ. ಅದೇನೆಂದರೆ – ರಮಾಬಾಯಿಯ ನಿಯೋಜಿತ ಕಾರ್ಯಕ್ರಮಗಳನ್ನು ಜನ ಅದೆಷ್ಟೊಂದು ಅಭಿಮಾನದಿಂದ, ವಿಶ್ವಾಸದಿಂದ ಸ್ವೀಕರಿಸುತ್ತಿದ್ದರು!!

"ರಮಾಬಾಯಿ ಎಸೋಸಿಯೇಶನ್" ಎಂಬ ಸಂಸ್ಥೆ ಸ್ಥಿರ ರೂಪ ತಾಳಿದ್ದು ೧೮೮೭ರ ಡಿ. ೧೩ರಂದು. ಕಟ್ಟಡ ರಚನೆಗಾಗಿ ೨೫,೦೦೦ ಡಾಲರ್‌ಗಳನ್ನು ಕೊಡುವುದಾಗಿಯೂ, ವಿದ್ಯಾರ್ಥಿನಿಯರ ವೆಚ್ಚಕ್ಕಾಗಿ ಪ್ರತಿವರ್ಷ ೫,೦೦೦ ಡಾಲರ್ ಕೊಡುವುದಾಗಿ ನಿರ್ಣಯವಾಯಿತು. ರಮಾಬಾಯಿ ಅಮೇರಿಕದಿಂದ ಹಿಂತಿರುಗುವಾಗ ಅಮೇರಿಕದ ಮೂರು ಜನ ಶಿಕ್ಷಕಿಯರನ್ನು ಕರೆತರುವುದಾಗಿ ಗೊತ್ತುಪಡಿಸಲಾಯಿತು. ಒಬ್ಬಳು ಕಿಂಡರ್ ಗಾರ್ಡನ್ ಅಥವಾ ಬಾಲೋದ್ಯಾನ ಶಿಕ್ಷಣಕ್ಕಾಗಿ, ಸಾಮಾನ್ಯ ವಿಜ್ಞಾನ, ವೃತ್ತಿ ಶಿಕ್ಷಣಕ್ಕಾಗಿ ಇಬ್ಬರು. ಭಾರತದ ಮೂರುಮಂದಿ ಮಹನೀಯರ ಹೆಸರುಗಳನ್ನು ಸಲಹೆಗಾರ ಮಂಡಲಿ ಯಲ್ಲಿ ಸೂಚಿಸಲಾಯಿತು. ರಾಮಕೃಷ್ಣ ಗೋಪಾಲ ಭಂಡಾರಕರ್, ಮಹಾದೇವ ಗೋವಿಂದ ರಾನಡೆ ಮತ್ತು ರಾ.ಬ. ದೇಶ್‌ಮುಖ ಇವರೇ ಸಲಹಾ ಮಂಡಳಿಯ ಸದಸ್ಯರು. ನಿಯೋಜಿತ ಶಾಲೆಯಲ್ಲಿ ಅವರವರ ಧರ್ಮಾಚರಣೆಗೆ ಪೂರ್ಣ ಸ್ವಾತಂತ್ರ್ಯವಿರಬೇಕೆಂದು

ನಿರ್ಣಯಿಸಲಾಯಿತು.

ರಮಾಬಾಯಿ ಪ್ರಾರಂಭಿಸಿದ ಈ ಮಹಾಕಾರ್ಯಕ್ಕೆ ಅಮೇರಿಕಾ ಖಂಡದ ಮಹನೀಯರಿಂದ ಬೆಂಬಲ ದೊರೆಯಿತು. ಸಂಘಕ್ಕೆ ಸಹಾಯ ಮಾಡಲು ಸ್ವಯಂ ಸ್ಫೂರ್ತಿಯಿಂದ ಜನ ಮುಂದಾದರು. ಇದಾದ ಮೇಲೆ ಕೆಲಸಮಯದಲ್ಲೇ ಅಂದರೆ ೧೮೮೮ ಜು. ೨೬ಕ್ಕೆ ಪಶ್ಚಿಮ ಅಮೇರಿಕಾದಲ್ಲೂ ರಮಾಬಾಯಿ ಅಸೋಸಿಯೇಶನ್ ಆಫ್ ಫೆಸಿಫಿಕ್ ಕೋಸ್ಟ್ ಎಂಬ ಹೆಸರಾಂತ ಸಂಘ ಸ್ಥಾಪನೆಯಾಯಿತು. ಸಂಘಕ್ಕೆ ಪೂರಕವಾಗಿ ಅಮೇರಿಕದ ಬೇರೆ ಬೇರೆ ಪಟ್ಟಣಗಳಲ್ಲಿ ಶಾಖೆಗಳನ್ನು ತೆರೆದರು. ಈ ಶಾಖೆಗಳಿಗೆ ರಮಾಬಾಯಿ ಸರ್ಕಲ್ಸ್ ಎಂದು ಹೆಸರಿಸಿದರು. ಮೊದಲ ವರ್ಷದಲ್ಲೇ ೧೮ ಸರ್ಕಲ್ಸ್ ಸ್ಥಾಪಿತವಾದವು. ಮುಂದಿನ ೫ ವರ್ಷಗಳಲ್ಲಿ ಇದರ ಸಂಖ್ಯೆ ೭೫ಕ್ಕೇರಿತು.

ತನ್ನ ದೇಶದ ಮಹಿಳೆಯರ ಉದ್ಧಾರದ ಅಂಗೀಕೃತ ಕಾರ್ಯಕ್ಕೆ ಹೀಗೆ ಪ್ರೋತ್ಸಾಹ, ಧನಸಹಾಯ ದೊರೆತುದು ರಮಾಬಾಯಿಗೆ ಸಿಕ್ಕ ದೊಡ್ಡ ಬೆಂಬಲ.

ಸರ್ ವಿಲಿಯಂ ಬೆಡೆರ್ ಬರ್ನ್ ಎಂಬವರು "ಪಂಡಿತಾ ರಮಾಬಾಯಿಯ "ನಾರ್ಮಲ್ ಸ್ಕೂಲ್" ಬಗ್ಗೆ ನಮಗಿಬ್ಬರಿಗೂ ಸಂತಸವಾಗಿದೆ. ಹಿಂದೂ ಸ್ತ್ರೀಯರ ಶಿಕ್ಷಣದ ಬಗ್ಗೆ ನಮಗೂ ಕಾಳಜಿ ಖಂಡಿತ ಇದೆ. ನಿಮ್ಮ ಯೋಜನೆ ನಿಶ್ಚಿತವಾದಾಗ ನಾವದಕ್ಕೆ ಸಹಾಯ ಕೊಡಲು ಸಿದ್ಧರು. ಇಷ್ಟೊಂದು ಜನಪ್ರಿಯತೆ ಗಳಿಸಿದ್ದಕ್ಕೆ ಅವಳನ್ನು ಮನಃಪೂರ್ವಕ ಅಭಿನಂದಿಸುತ್ತೇವೆ."

## "High caste Hindu Women"

"ರಮಾಬಾಯಿ ಅಸೋಸಿಯೇಶನ್‌ನ" ಕಾರ್ಯಕಲಾಪ ಆರಂಭವಾದೊಡನೆ ಇತ್ತ ರಮಾಬಾಯಿ ಉಚ್ಚವರ್ಗದ ಹಿಂದೂ ಮಹಿಳೆ "High Caste Hindu Women" ಎಂಬ ಪುಸ್ತಕವನ್ನು ಆಂಗ್ಲ ಭಾಷೆಯಲ್ಲಿ ಬರೆದು ಪ್ರಕಟಿಸಿದರು. ಇದರಲ್ಲಿ ಭಾರತದ ಬಾಲವಿಧವೆಯರ ಸ್ಥಿತಿಗತಿಗಳನ್ನು ವರ್ಣಿಸಿದ್ದೇ ಅಲ್ಲದೆ ಅವರ ಸುಧಾರಣೆಗಾಗಿ ಧನಸಹಾಯವನ್ನು ಇಲ್ಲಿ ಕೋರಲಾಗಿತ್ತು. ಇದಕ್ಕೆ ಫಿಲಡೆಲ್ಫಿಯಾದ ಮಹಿಳಾ ಮೆಡಿಕಲ್ ಕಾಲೇಜಿನ Dean ಆಗಿದ್ದ ಡಾ. ಆರ್.ಆರ್. ಬಾಡ್ಲೆ ಅವರು ೨೨ ಪುಟಗಳ ಮುನ್ನುಡಿ ಬರೆದಿದ್ದರು. ಇದರಲ್ಲಿ ಡಾ. ಆನಂದಿಬಾಯಿ ಹಾಗೂ ರಮಾಬಾಯಿ ಇಬ್ಬರ ಸಂಕ್ಷಿಪ್ತ ಜೀವನ ಚರಿತ್ರೆ ಕೊಡಲಾಗಿತ್ತು. ಈ ಪುಸ್ತಕವು ರಮಾಬಾಯಿಯ ಕೆಲಸಗಳಿಗೆ ಅಮೇರಿಕದ ನಾಗರಿಕರಿಂದ ಧನಸಹಾಯ ಕೋರುವಂತಿತ್ತು.

ಈ ನಡುವೆ ೧೮೮೬ರಲ್ಲಿ ತನ್ನ ವೈದ್ಯಕೀಯ ಅಭ್ಯಾಸ ಮುಗಿಸಿದ್ದ ಆನಂದಿಬಾಯಿ ಜೋಶಿ ಇವರು ಓದುವಿಕೆಯಿಂದಲೂ ಅಮೇರಿಕಾದಲ್ಲಿರುವಾಗ ರೋಗಿಗಳ ಹಾಗೂ

ಬಾಣಂತಿಯರ ಆರೈಕೆ, ಶುಶ್ರೂಷೆ ಕೆಲಸಗಳಲ್ಲೂ ತುಂಬ ಶ್ರಮಿಸಿ ಬಳಲಿದ್ದರು. ಈ ನಿತ್ರಾಣದಲ್ಲೇ ಭಾರತಕ್ಕೆ ಆಗಮಿಸಿದ್ದ ಆನಂದಿಬಾಯಿ ಇಲ್ಲಿ ಬರುತ್ತಿದ್ದಂತೆ ಮತ್ತೆ ವೈದ್ಯಕೀಯ ಸೇವೆ ಆರಂಭಿಸಿದಳು. ಆದರೆ ಮೊದಲೇ ಇದ್ದ ಕ್ಷಯದ ಬಾಧೆ ಹೆಚ್ಚಾಗಿ ೨೬ನೇ ಫೆಬ್ರವರಿ ೧೮೮೭ರಲ್ಲಿ ತನ್ನ ಅತೀ ಚಿಕ್ಕ ವಯಸ್ಸಿನಲ್ಲಿಯೇ ಪೂನಾದಲ್ಲಿ ಕಾಲವಶರಾದರು. ಭಾರತದ ಇತಿಹಾಸಕ್ಕೆ ಮೈಲಿಗಲ್ಲು ಹಾಕಿದ್ದ ಆನಂದಿಬಾಯಿ ಜೋಶಿ ಇವರ ಅಕಾಲಿಕ ಅಂತ್ಯ ಇಡೀ ದೇಶಕ್ಕೆ ದೊಡ್ಡ ಆಘಾತವಾಯಿತು; ನಷ್ಟ ಉಂಟು ಮಾಡಿತು. ಅವರ ಸೇವೆ ಪಡೆವ ಭಾಗ್ಯ ದೇಶೀಯರಿಗೆ ಲಭಿಸದೇ ಹೋಯಿತು.

ರಮಾಬಾಯಿಯ "ಉಚ್ಚವರ್ಗದ ಹಿಂದೂ ಮಹಿಳೆ" ಪುಸ್ತಕವು ಅಮೇರಿಕಕ್ಕೆ ಹೋದ ಪ್ರಥಮ ಹಿಂದೂ ಮಹಿಳೆ ಹಾಗೂ ಭಾರತದ ಪ್ರಥಮ ಮಹಿಳಾ ಡಾಕ್ಟರಳಾದ ದಿ. ಆನಂದಿಬಾಯಿ ಜೋಶಿ ಹಾಗೂ ಪಂ. ರಮಾಬಾಯಿಯ ಮಾತೃಶ್ರೀ ಲಕ್ಷ್ಮೀಬಾಯಿಯ ಸವಿನೆನಪಿಗಾಗಿ ಸಮರ್ಪಿಸಲ್ಪಟ್ಟಿತು. ಇದರ ಹತ್ತುಸಾವಿರ ಪ್ರತಿಗಳು ಅಮೇರಿಕದಲ್ಲಿ ಖರ್ಚಾದವು. ಅಮೇರಿಕದ ಜನತೆಯಿಂದ ಈ ಪುಸ್ತಕದಿಂದಾಗಿಯೇ ಎಸೋಸಿಯೇಶನ್‌ಗೆ ಧನಸಹಾಯ ದೊರೆಯಿತು. ಈ ಪುಸ್ತಕದ ಮಾರಾಟದಿಂದ ಖರ್ಚು ಕಳೆದು ರೂ. ೨೫,೦೦೦ ಉಳಿಯಿತು. ಇದರ ಲಾಭದಿಂದ ಭಾರತದಲ್ಲಿ ಬೋಧಿಸಬೇಕಾದ ಕಿಂಡರ್ ಗಾರ್ಡನ್‌ನ ಪಠ್ಯಪುಸ್ತಕಗಳನ್ನು ಮರಾಠಿ ಭಾಷೆಯಲ್ಲಿ ಬರೆದು ಪುಸ್ತಕಗಳಲ್ಲಿ ಮುದ್ರಿಸ ಬೇಕಾದ ೬೦೦ 'Electrotypc' ಚಿತ್ರಗಳ ಪ್ಲೇಟ್‌ಗಳನ್ನು ರಮಾಬಾಯಿ ಖರೀದಿಸಿದರು.

ರಮಾಬಾಯಿಯ ಜೀವನ ಸರಣಿ ಎಷ್ಟೊಂದು ವಿಸ್ಮಯಕರ! ೨೦-೨೫ ವರ್ಷದ ಈ ತರುಣ ಹಿಂದೂ ಮಹಿಳೆ ಇಂಗ್ಲಿಷಿನ ಸರಿಯಾದ ಜ್ಞಾನವೂ ಇಲ್ಲದೆ ಎರಡು ವರ್ಷದ ಕೂಸನ್ನು ಕಂಕುಳಲ್ಲಿಟ್ಟುಕೊಂಡು, ಸಂಸಾರದ-ಬಂಧುಗಳ ಯಾವುದೇ ಮಾನಸಿಕ-ನೈತಿಕ ಬೆಂಬಲವೂ, ಆಧಾರವೂ ಇಲ್ಲದೆ ತನಗೆ ಗೌರವ, ಪ್ರೇಮ ಸಾಂತ್ವನ ನೀಡಬಲ್ಲ ಜೀವನ ಸಂಗಾತಿಯನ್ನೂ ಕಳಕೊಂಡ ಸ್ಥಿತಿಯಲ್ಲಿ ಇಂಗ್ಲೆಂಡಿಗೆ ಹೋಗಿ ಅಲ್ಲಿ ೪ ವರ್ಷಗಳಲ್ಲೇ ಇಂಗ್ಲಿಷ್ ಭಾಷೆಯಲ್ಲಿ ಪ್ರವೀಣತೆ-ಪ್ರಬುದ್ಧತೆ ಗಳಿಸಿ ಅದೇ ಇಂಗ್ಲಿಷಿನಲ್ಲಿ ಭಾಷಣ - ವ್ಯಾಖ್ಯೆ ಕೊಡುವಂತಹ ಎಲ್ಲವೂ ರೋಚಕ ಹಾಗೂ ಅದ್ಭುತ. ಇಂಗ್ಲಿಷಿನಲ್ಲೇ ಪುಸ್ತಕ ಬರೆದು ಅಮೇರಿಕದಲ್ಲಿ ಹೊಸ ಬಗೆಯ ಕ್ರಾಂತಿ ಎಬ್ಬಿಸಿದಂತಾಯಿತು. ಅಮೇರಿಕದ ಸ್ತ್ರೀಯರಿಗೆ ರಮಾಬಾಯಿ ಬಗ್ಗೆ ಅತೀವ ಗೌರವವುಂಟಾಯಿತು.

ಹಾಗೆ ನೋಡಿದರೆ ರಮಾಬಾಯಿ ಅಮೇರಿಕಕ್ಕೆ ಭೇಟಿ ಕೊಡುವ ೪೬ ವರ್ಷದ ಮೊದಲೇ ೧೮೪೬ರಲ್ಲಿ ಅಮೇರಿಕದ ಮಹಿಳೆಯರ ಸ್ಥಿತಿ ಬಗ್ಗೆ "ಹರಿಯೇಟ್ ಮಾರ್ಟೋನಿ" ಎಂಬ ಇಂಗ್ಲೆಂಡಿನ ಪ್ರೊಫೆಸರ್ ಒಬ್ಬಳು ಅಧ್ಯಯನ ನಡೆಸಿ 'ಅಮೇರಿಕನ್ ಸೊಸೈಟಿ' ಎಂಬ ಪುಸ್ತಕ ಬರೆದಿದ್ದಳು. ೧೮೪೫ರಲ್ಲಿ "ಅಂತರ್ಜಲ ದೂರದರ್ಶಕ"ವನ್ನು ಒಬ್ಬ ಮಹಿಳೆ ಕಂಡು ಹಿಡಿದಳು. ಇನ್ನೊಬ್ಬಳು ಸಮುದ್ರ ಪ್ರಯಾಣದಲ್ಲಿ ಉಪಯೋಗಿಸುವ

"ಲೈಫ್ ಸೇವರ್ ಜಾಕೆಟ್"ನ ಆವಿಷ್ಕಾರ ಮಾಡಿದ್ದಳು. ಹೊಗೆಬಂಡಿಯ ಆವಿಯ ಯಂತ್ರದಲ್ಲಿ ಸುಧಾರಣಾ ಆವಿಷ್ಕಾರವಾಗಿದ್ದೂ ಅಮೇರಿಕನ್ ಮಹಿಳೆಯಿಂದಲೇ. ಅಮೇರಿಕನ್ ಮಹಿಳೆಯರು ಇನ್ನೂ ಮುಂದುವರಿದು, ನೆರೆಯಿಂದ ಬೆಳೆ ನಾಶವಾಗದಂತೆ ಮಾಡುವ, ಪೈರು ಕಟಾಯಿಸುವ ಯಂತ್ರ, ಧಾನ್ಯದ ಸಿಪ್ಪೆ ಬೇರೆ ಮಾಡುವ ಯಂತ್ರ ಇತ್ಯಾದಿಗಳನ್ನು ತಯಾರಿಸಿದ್ದರು.

ಮಿಸ್ ಫುಲ್ಲರ್ ರಮಾಬಾಯಿಯವರ ನಿಕಟವರ್ತಿಯಾಗಿದ್ದಳು. ಅವಳು ಬರೆದ "ಟ್ರಿಂಪ್ ಆಫ್ ವುಮನ್" ಪುಸ್ತಕದಲ್ಲಿ ಈ ವಿಷಯ ಹೇಳಿಕೊಂಡಿರುತ್ತಾಳೆ. ತಾನು ಕ್ರಿಶ್ಚಿಯನ್ ಆಗಲು ಹಿಂದೂ ಧರ್ಮದ ಕಡಿವಾಣಗಳು, ಪುರೋಹಿತಶಾಹಿತ್ವಗಳು ಹಾಗೂ ಕ್ರಿಶ್ಚಿಯಾನಿಟಿಯಲ್ಲಿದ್ದ ಧರ್ಮದ ವಿಶೇಷ ದೃಷ್ಟಿಕೋನ ಪ್ರೇರಿಸಿದವು ಎಂಬುದಾಗಿ ರಮಾಬಾಯಿ ತಾವು ಬರೆದ 'ಟೆಸ್ಟಿಮೊನಿ' ಎಂಬ ಪುಸ್ತಕದಲ್ಲಿ ಹೇಳಿಕೊಂಡಿದ್ದಾರೆ. ಹಾಗೇ ಆ ಪುಸ್ತಕದಲ್ಲಿ ಅವರು ಕೊಂಕಣಸ್ಥರೇ ಆಗಿದ್ದ ಫಾದರ್ ಗೋರೆ ಎಂಬವರ ಪ್ರಭಾವಕ್ಕೆ ಒಳಗಾಗಿದ್ದುದು ಮನೋಗತವಾಗುತ್ತದೆ. ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತರಾಗಿದ್ದ ಇವರು ಆ ಧರ್ಮದ ಮನುಷ್ಯ ಜೀವನ ಶೈಲಿಗೆ ಹೊಂದಾಣಿಕೆಯಾಗುವಂತಿದ್ದ ತತ್ವದ ಬಗ್ಗೆ ರಮಾಬಾಯಿ ಅವರಿಗೆ ತಿಳುವಳಿಕೆ ನೀಡಿದ್ದರು.

ಆದರೆ ರಮಾಬಾಯಿ ವ್ಯಕ್ತಿತ್ವ ನೇರವಾಗಿತ್ತು. ಯಾವುದೇ ಧರ್ಮಾಂಧತೆಗೆ ಒಳಗಾಗುವ ಪ್ರವೃತ್ತಿ ಅವರದಾಗಿರಲಿಲ್ಲ. "ಯುನೈಟೆಡ್ ಸ್ಟೇಟ್‌ನಲ್ಲಿ ಲೋಕಸ್ಥಿತಿ ಮತ್ತು ಪ್ರವಾಸವೃತ್ತಿ" ಎಂಬ ಪುಸ್ತಕದಲ್ಲಿ ಕ್ರಿಶ್ಚಿಯನ್ನರ ಕೆಲವು ವಿಪರೀತವಾದ ಧರ್ಮಾಂಧತೆಯನ್ನೂ ವಿರೋಧಿಸಿದ್ದಾರೆ. 'A testimony'ಯಲ್ಲಿ ಬರೆಯುತ್ತಾರೆ. "As I had lost all faith in my religion my heart was lungeling after something better"

ಹಾಗೇ "The word seed" ಎಂಬ ಪುಸ್ತಕವನ್ನೂ ಬರೆದರು ರಮಾಬಾಯಿ. ಹಿಂದೂ ಧರ್ಮ ತ್ಯಾಗ ಮಾಡಿದರೂ ಹಿಂದುತ್ವವನ್ನೆಂದೂ ಬಿಡಲಿಲ್ಲ.

೧೮೮೭ರಲ್ಲಿ "ದಿ ಡೈಲಿ ಇಂಟರ್ ಓಸಿಯನ್ ಚಿಕಾಗೋ" ಪತ್ರಿಕಾ ಸಂದರ್ಶನ ದಲ್ಲಿ ಪಂಡಿತಾ ಭಾರತೀಯ ಮಹಿಳೆಗಿರುವ ಅಡ್ಡಿಗಳನ್ನು ಹೀಗೆ ಹೇಳಿಕೊಂಡಿದ್ದಾರೆ : ಒಬ್ಬ ಭಾರತೀಯ ಮಹಿಳೆ ತನ್ನ ಪತಿಯಿಂದ ಮಿಶನರಿಗಳ ಬಗ್ಗೆ ತಿಳುವಳಿಕೆ ಪಡೆದರೂ. ಅವರ ಬಗ್ಗೆ ವಿಶ್ವಾಸ ತೋರಿದರೂ ಸಾಕು ಏಟು ತಿನ್ನುವಂತಹ ಪರಿಸ್ಥಿತಿ ಇದೆ.

ಈ ಧೀರ ಮಹಿಳೆ ತನ್ನ ಗುರಿಯನ್ನೊಂದೇ ನೋಡುತ್ತ ಮುಂದುವರಿದರು. ಸುತ್ತಲಿನವರ ಟೀಕೆಗೆ ಅಧೀರರಾಗಲಿಲ್ಲ. ಆ ಸಮಯದಲ್ಲಿ ಕೇಸರಿ ಪತ್ರಿಕೆಯಲ್ಲಿ "ರಮಾಬಾಯಿ ಹಿಂದೂಧರ್ಮ ಬಿಟ್ಟರೂ ನಮ್ಮ ದೇಶದ ಸ್ತ್ರೀಯರ ಉದ್ಧಾರದ ಬಗ್ಗೆ ಆಲೋಚಿಸುತ್ತಾರೆ

ಎಂಬುದೇ ಮಹತ್ವದ್ದು" ಎಂದು ಬರೆದಿದ್ದಾರೆ. ಆದರೆ ಮತ್ತೊಂದೆಡೆ ಅವಮಾನಕಾರಿಯಾಗಿ ಬರೆದಾಗ ಆ ಪತ್ರಿಕೆ ವಿರುದ್ಧ ರಮಾಬಾಯಿ ಆಕ್ಷೇಪಿಸದೇ ಇರಲಿಲ್ಲ. ಆಗ ಪತ್ರಿಕೆಯವರು ಕ್ಷಮಾಪಣೆ ಕೇಳಿದ್ದರು. ಅಂಥ ಘನ ವ್ಯಕ್ತಿತ್ವ ರಮಾಬಾಯಿ ಅವರದ್ದಾಗಿತ್ತು.

ಕ್ರಿಶ್ಚಿಯನ್ ಧರ್ಮ ಸ್ವೀಕರಿಸಿದ ಮೇಲೆ "ಮನುಷ್ಯ ಧರ್ಮ" ಎಂಬ ವ್ಯಾಖ್ಯಾನದಲ್ಲಿ ಪ್ರತಿವ್ಯಕ್ತಿ-ವ್ಯಕ್ತಿಗತ ಮತಧರ್ಮ ವಿಭಿನ್ನವಾಗಿದ್ದರೂ ದೇಶಸೇವೆಯ ಬಗ್ಗೆ ಒಂದೇ ಮತವಿರಬೇಕೆಂಬುದು ಅವರ ನ್ಯಾಯವಾಗಿತ್ತು. ದೇಶಹಿತ, ಲೋಕಹಿತಕ್ಕೆ ಮತಭೇದ ಮರೆತು ದೇಶಸೇವೆ ಮಾಡಬೇಕೆಂಬುದೇ ಅವರ ಧ್ಯೇಯವಾಗಿತ್ತು.

ಸರೋಜಿನಿ ನಾಯ್ಡು ಒಂದೆಡೆ ಹೀಗೆ ಹೇಳಿದ್ದರು "The first christian lady to be enrolled in the calender of saints"

ಇಷ್ಟೆಲ್ಲ ಸಾಧನೆಗೈದ ಭಾರತೀಯ ಮಹಿಳಾ ಉದ್ಧಾರಕ್ಕಾಗಿ ಕಂಕಣ ತೊಟ್ಟ ಪಂ. ರಮಾಬಾಯಿ ತನಗೆ ಸಿಕ್ಕ ಬೆಂಬಲದಿಂದ ಬಲಗೊಂಡರು. ಮಾನಸಿಕವಾಗಿ ಸುದೃಢಗೊಂಡ ಪಂಡಿತಾ ತಿರುಗಿ ಭಾರತಕ್ಕೆ ಬರುವ ಯೋಚನೆ ಮಾಡಿದರು. ಆಗ ಒಬ್ಬ ಅಮೇರಿಕನ್ ಮಹಿಳೆ ರಮಾಬಾಯಿಯನ್ನು ಕಂಡು ಪ್ರಶ್ನಿಸುತ್ತಾಳೆ. ನೀವಿಷ್ಟು ಹೋರಾಟ ನಡೆಸಿ ದ್ರವ್ಯ ಸಂಗ್ರಹ ಮಾಡಿದ್ದು ಅನಾಥ ವಿಧವೆಯರಿಗಾಗಿ ಹಾಗೂ ಬಡ ಹೆಣ್ಣು ಮಕ್ಕಳಿಗಾಗಿ. ಆದರೆ ನೀವು ಮನೋರಮೆಗಾಗಿ ಏನು ಮಾಡಿದ್ದೀರಿ? ಆಗ ರಮಾಬಾಯಿ ನೇರವಾಗಿ ಹೇಳುತ್ತಾಳೆ "ಆ ಬಗ್ಗೆ ನಾನೇನೂ ಆಲೋಚಿಸಲಿಲ್ಲ". ಆ ಮಹಿಳೆ ಮತ್ತೆ ವಿನಂತಿಸಿದರು : "ಹಾಗಾದರೆ ದಯಮಾಡಿ ಒಪ್ಪಿಗೆ ಕೊಡಿ. ಅವಳ ಶಿಕ್ಷಣದ ಪೂರಾ ಖರ್ಚನ್ನು ನಾನು ಕೊಡುತ್ತೇನೆ." ೧೮ ವರ್ಷಗಳವರೆಗೆ ಮನೋರಮೆಯ ಶಿಕ್ಷಣದ ಖರ್ಚನ್ನು ಅವಳೇ ನೋಡಿದಳು.

ಅಂತೂ ಎಲ್ಲರಿಂದ ಬೀಳ್ಕೊಂಡ ರಮಾಬಾಯಿ ಅಮೇರಿಕದ ಇಬ್ಬರು ಶಿಕ್ಷಕಿಯರೊಡನೆ ೧೮೮೯ರ ಫೆಬ್ರವರಿಯಲ್ಲಿ ಕಲ್ಕತ್ತದ ಬಂದರಿಗೆ ಬಂದಿಳಿದರು.

## ಶಾರದಾ ಸದನದ ಸ್ಥಾಪನೆ

ಕಲ್ಕತ್ತಾದಿಂದ ಮುಂಬೈಗೆ ಬಂದವರೇ ಮುಂಬೈನ ಚೌಪಾಟಿ ಎಂಬಲ್ಲಿ ವಿಲ್ಸನ್ ಕಾಲೇಜಿನ ಸಮೀಪ ಬಾಲವಿಧವೆಯರ ವಸತಿಗೃಹ ಹಾಗೂ ಪಾಠಶಾಲೆಯನ್ನು ಒಂದು ಬಾಡಿಗೆ ಕಟ್ಟಡದಲ್ಲಿ ೧೮೮೯ರ ಮಾರ್ಚ್ ೧೧ರಂದು ರಮಾಬಾಯಿ ಆರಂಭಿಸಿದರು. ಈ ಸಮಾರಂಭಕ್ಕೆ ಉದ್ಘಾಟಕರಾಗಿ ಬಂದವರು ಹಿರಿಯ ವಿದುಷಿ ಕಾಶೀಬಾಯಿ ಕಾನಿಟ್ಕರ್. ಸಾರ್ವಜನಿಕ ಸಭೆಯೊಂದರ ಅಧ್ಯಕ್ಷತೆಯನ್ನು ಮಹಿಳೆ ವಹಿಸಿಕೊಂಡಿದ್ದು ಭಾರತದಲ್ಲಿ ಬಹುಶಃ ಇದೇ ಮೊದಲು. ಇದರ ಮೊದಲ ಕಲಿಕಾರ್ಥಿಯ ಹೆಸರು ಶಾರದಾ. ಹಾಗಾಗಿ ಈ

ಪಾಠಶಾಲೆಗೆ 'ಶಾರದಾ ಸದನ' ಎಂಬ ಹೆಸರು ಬಂತು. ಇದು ಶಾಶ್ವತವೂ ಆಯ್ತು.

ಅಂದು ನಡೆದ ಸಭೆಯಲ್ಲಿ ರಮಾಬಾಯಿ ಭಾರತದ ಸ್ತ್ರೀಯರ ಕೀಳರಿಮೆ ಕುರಿತು ದೀರ್ಘ ಭಾಷಣ ಮಾಡಿದರು. ಭಾರತದಲ್ಲಿ ಸ್ತ್ರೀಯರನ್ನು ಹೇಗೆ ಕೀಳಾಗಿ ಕಾಣಲಾಗುತ್ತಿದೆ ಎಂಬುದನ್ನು ವಿವರಿಸಿ ಸ್ತ್ರೀ ಸುಧಾರಣೆಗೆ ಆಗಬೇಕಾದ ವ್ಯಾಪಕ ಕೆಲಸಗಳ ಬಗ್ಗೆ ಒತ್ತಿ ಹೇಳಿದಳು. ವಿದ್ವಜ್ಜನರ ಆ ಸಭೆಯಲ್ಲಿ ರಮಾಬಾಯಿಯ ಯೋಜನೆಗಳಿಗೆ ಸಾಕಷ್ಟು ಅನುಮೋದನೆ ದೊರೆಯಿತು. ಶಾರದಾ ಸದನದಲ್ಲಿ ಕೇಶಮುಂಡನ ಮಾಡಿಕೊಂಡ ಬಾಲ ವಿಧವೆಯೊಬ್ಬಳು ಬಂದು ಸೇರಿದಳು. ರಮಾಬಾಯಿ ಆಕೆಗೆ ತಲೆಕೂದಲು ಬೆಳೆಸುವಂತೆ ಉತ್ತೇಜನ ನೀಡಿದ್ದೇ ಅಲ್ಲದೆ ಅವಳ ವಿದ್ಯಾಭ್ಯಾಸ ಮುಂದುವರಿಯುವಂತೆ ಮಾಡಿದರು. ರಮಾಬಾಯಿ ಮುಂದೆ ಆಕೆಯನ್ನು ಮದುವೆಯಾಗುವಂತೆ ಪ್ರೊ. ದೋಂಡೋ ಕೇಶವ ಕರ್ವೆಯವರನ್ನು ಪ್ರೋತ್ಸಾಹಿಸಿದರು. ಆದರೆ ಇದಕ್ಕಾಗಿ ಸಂಪ್ರದಾಯಸ್ಥ ಸಮಾಜದಿಂದ ವಿರೋಧ ಎದುರಿಸಬೇಕಾಯಿತು. ಕರ್ವೆಯವರ ತಂದೆಯವರು ಇದನ್ನು ವಿರೋಧಿಸುವುದಕ್ಕಾಗಿಯೇ ಮಗನಿಂದ ಬೇರೆ ಹೋಗಿ ಮಗನ ಜೀವಂತ ಶ್ರಾದ್ಧ ಮಾಡಿದರು. ಆದರೆ ಕರ್ವೆ ದೊಂಡೋ ಕೇಶವರು ತಮ್ಮ ನಿರ್ಧಾರ ಕೈಬಿಡಲಿಲ್ಲ. ವಿಧವೆಯಾದ ಆನಂದಿಬಾಯಿಯನ್ನು ಮದುವೆಯಾದರು. ರಮಾಬಾಯಿಯ ಸ್ತ್ರೀ ಸುಧಾರಣಾ ಕಾರ್ಯದಿಂದ ಸ್ಫೂರ್ತಿ ಪಡೆದು ಬೇರೊಂದು ಸಂಸ್ಥೆಯನ್ನು ಹಿಂಗಣೆ (ಪೂನಾ)ಯಲ್ಲಿ ಕರ್ವೆಯವರು ಸ್ಥಾಪಿಸಿದ್ದು ಈಗಲೂ ಅದು ಕಾರ್ಯ ನಿರ್ವಹಿಸುತ್ತಿದೆ.

ಶಾರದಾ ಸದನದಲ್ಲಿ ಬಂದ ಬಾಲವಿಧವೆಯ ಜೀವನವು ಸಂತೋಷಕರವಾಗಿರಬೇಕೆಂಬ ಉದ್ದೇಶದಿಂದ ಪಂ. ರಮಾಬಾಯಿ ಅವರನ್ನು ಉತ್ತಮ ರೀತಿಯಲ್ಲಿ ಪೋಷಿಸುತ್ತಿದ್ದರು. ಮೊತ್ತಮೊದಲ ಬಾರಿಗೆ ಭಾರತದ ವಿಧವೆಯರನ್ನು "ಅಪಶಕುನ' ಎಂದು ಗುರುತಿಸದೆ ಪ್ರೀತಿ, ಮಮತೆ, ಆದರಗಳಿಂದ ಕಾಣುವ ಸತ್ಸಂಪ್ರದಾಯವನ್ನು ಹುಟ್ಟು ಹಾಕಿದವರು ರಮಾಬಾಯಿ ತಮ್ಮ ಶಾರದಾ ಸದನದ ಮೂಲಕ.

ಒಂದೊಮ್ಮೆ ಸಂಪ್ರದಾಯಸ್ಥ ಸಲಹಾ ಮಂಡಳಿಗೆ ಇದು ಸರಿ ಕಂಡುಬರಲಿಲ್ಲ. ಈ ಸಲಹಾ ಸಮಿತಿಯಲ್ಲಿ ಕೃಷ್ಣಾಜೀ ಲಕ್ಷಣ ನೂಲಕರ, ನ್ಯಾಯಮೂರ್ತಿ ಮಹಾದೇವ ಗೋವಿಂದ ರಾನಡೆ, ಡಾ. ರಾಮಕೃಷ್ಣ ಭಂಡಾರಕರ, ನ್ಯಾಯಮೂರ್ತಿ ಕಾಶೀನಾಥ ತ್ರ್ಯಂಬಕ ತೇಲಂಗ ಮುಂತಾದವರಿದ್ದರು. ಭಾರತದಲ್ಲಿ ಈ ರೀತಿ ವಿಧವೆಯರನ್ನು ತೀರಾ ಎತ್ತಿ ಕಟ್ಟುವುದು ಸರಿಯಲ್ಲ ಎಂಬುದು ಅವರ ಅಭಿಪ್ರಾಯ. ರಮಾಬಾಯಿ ತನ್ನ ಶಾರದಾ ಸದನದ ಧ್ಯೇಯೋದ್ದೇಶವೇ ಅದು. ಅದರಿಂದ ಹಿಂದೆ ಸರಿಯಲಾರೆ. ವಿಧವೆಯರನ್ನು ಬಿಟ್ಟು ತಾನಿಲ್ಲವೆಂದು ಖಡಾಖಂಡಿತವಾಗಿ ಹೇಳಿ ಆ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಗಳನ್ನಿಡುತ್ತಲೇ ಹೋದರು.

ಶಾರದಾ ಸದನದ ವೆಚ್ಚಕ್ಕೆ ಬೇಕಾದ ಹಣವನ್ನು ಅಮೇರಿಕಾದ ಪಂ. ರಮಾಬಾಯಿ ಎಸೋಸಿಯೇಶನ್‌ನವರು ಕಳುಹಿಸುತ್ತಿದ್ದರು. ಅಲ್ಲದೆ ಪ್ರತಿ ವಿದ್ಯಾರ್ಥಿಗೂ ಒಂದು ವರ್ಷಕ್ಕೆ ೧೦ ಪೌಂಡ್ ವಿದ್ಯಾರ್ಥಿ ವೇತನವನ್ನು ಕೊಡುತ್ತಿದ್ದರು. ಈ ತೆರದಲ್ಲಿ ಹತ್ತು ವರ್ಷ ಸಹಾಯ ನೀಡುವುದಾಗಿ ಎಸೋಸಿಯೇಶನ್ ಒಪ್ಪಿಕೊಂಡಿತ್ತು. ಮುಂಬೈನಲ್ಲಿ ಆರಂಭವಾದ ಶಾರದಾ ಸದನದಲ್ಲಿ ಜೀವನ ವೆಚ್ಚಗಳು ಹೆಚ್ಚಾಗಿದ್ದುದರಿಂದ ಮೊದಲು ಪೂನಾದಲ್ಲಿ ಸ್ಥಾಪಿಸಬೇಕೆಂದು ನಿರ್ಧರಿಸಿದ ಪ್ರಕಾರ, ೧೮೯೦ರ ನವೆಂಬರ್‌ನಲ್ಲಿ ಪೂನಾಕ್ಕೆ ಸ್ಥಳಾಂತರಗೊಂಡಿತು.

ಪುಣೆಯಲ್ಲಿ ಶಾರದಾ ಸದನ ಮೊದಲು ಕಾರ್ಯಾರಂಭ ಮಾಡಿದ್ದು 'ಅಗಾಖಾನ' ಬಂಗ್ಲೆಯಲ್ಲಿ. ಈ ನಡುವೆ ಶಾರದಾ ಸದನ ಸ್ಥಿರ ರೂಪ ತಾಳಿದ ಮೇಲೆ ರಮಾಬಾಯಿಗೆ ತನ್ನ ತವರೂರಿಗೆ ಭೇಟಿ ಕೊಡಬೇಕೆಂಬ ಹಂಬಲ ಸಹಜವಾಗಿ ಆಯಿತು. ಹಾಗೆ, ೧೮೯೦-೯೧ರಲ್ಲಿ ಸ್ವಗ್ರಾಮವಾದ ಕಾರ್ಕಳಕ್ಕೆ ಬಂದಳು. ತನ್ನ ತಂದೆ ಅನಂತ ಶಾಸ್ತ್ರಿಗಳನ್ನು, ಊರು ಬಿಟ್ಟು ಅನೇಕ ವರ್ಷಗಳಾಗಿದ್ದರೂ ಜನರು ಮರೆತಂತಿರಲಿಲ್ಲ. ಆದರೆ ಈಕೆ ವಿಧವೆ ಅನ್ನುವ ಕಾರಣಕ್ಕೋ ಕ್ರಿಶ್ಚಿಯನ್ ಪಂಥಕ್ಕೆ ಸೇರಿದವಳೆಂಬ ಕಾರಣಕ್ಕೋ ಊರವರು, ಸಮಾಜದವರು ಉತ್ಸಾಹ ತೋರಿಸಲಿಲ್ಲ.

ಅಂಥ ಧೀರ ಮಹಿಳೆಗೆ ಅರ್ಹವಾದ ರೀತಿಯಲ್ಲಿ ಸ್ವಾಗತ ದೊರೆಯಲಿಲ್ಲ. ಅದರಿಂದ ವಿಚಲಿತರಾಗದೇ ತನ್ನ ಹುಟ್ಟೂರು ಮಾಳವನ್ನೂ, ಜನ್ಮಸ್ಥಳವಾದ ಗಂಗಾಮೂಲ ವನ್ನೂ ಮನದಿಚ್ಛೆಯಂತೆ ಸಂದರ್ಶಿಸಿದರು. ಸಂತೋಷ ಪಟ್ಟರು. ಹಿಂದುರುಗಬೇಕಾದರೆ ಅನೇಕ ಅನಾಥ ಅಸಹಾಯಕ ವಿಧವೆಯರನ್ನು ತನ್ನೊಂದಿಗೆ ಪುಣೆಗೆ ಕರೆದೊಯ್ದರು.

೧೮೯೨ರಲ್ಲಿ ೪೨,೦೦೦ ರೂಪಾಯಿಗಳ ವೆಚ್ಚದ ಸ್ವಂತ ಕಟ್ಟಡಕ್ಕೆ ಶಾರದಾ ಸದನವು ಸ್ಥಳಾಂತರಗೊಂಡಿತು. ಪುಣೆಯಲ್ಲಿ ಪಂ. ರಮಾಬಾಯಿಗೆ ಅನೇಕರಿಂದ ವಿರೋಧವಿದ್ದರೂ ಅಲ್ಲಿ ಶಾರದಾ ಸದನದ ಕೆಲಸಗಳು ಮಾತ್ರ ಅಭಿವೃದ್ಧಿಗೊಂಡವು. ಅಬಲೆಯರ ವಿಚಾರ ಕಿವಿಗೆ ಬಿದ್ದೊಡನೆ ಅಲ್ಲಿಗೆ ಧಾವಿಸಿ ಅವರನ್ನು ಕರೆದುಕೊಂಡು ಬಂದು ಶಾರದಾ ಸದನದಲ್ಲಿ ತಾಯಿ ಪ್ರೀತಿಯಿಂದ ಸಲಹುತ್ತಿದ್ದರು. ಈ ನಡುವೆ ವಿದ್ಯಾರ್ಥಿನಿಯರ ಸಂಖ್ಯೆ ೭೪ಕ್ಕೇರಿತ್ತು. ಶಾರದಾ ಸದನದ ಕಟ್ಟಡವು ಸುಸಜ್ಜಿತವಾಗಿತ್ತು. ವಸತಿಗೃಹದಲ್ಲಿ ಪ್ರತಿ ವ್ಯಕ್ತಿಯ ಮೇಲ್ವಿಚಾರಣೆಯನ್ನು ರಮಾಬಾಯಿ ಸ್ವತಃ ತಾನೇ ಮಾಡುತ್ತಿದ್ದರು. ಹೂವಿನ ತೋಟ, ಪುಸ್ತಕಗಳ ಕೋಣೆ - ಗ್ರಂಥಾಲಯ, ವಿಹಾರಕ್ಕಾಗಿ ಸ್ಥಳ ಇವೆಲ್ಲ ಸೌಲಭ್ಯಗಳಿಂದ ಶಾರದಾ ಸದನ ಬೆಳಗುತ್ತಿತ್ತು. ರಮಾಬಾಯಿ ವಿದ್ಯಾರ್ಥಿನಿಯರಿಗೆ ಸೂಕ್ಷ್ಮದರ್ಶಕದಿಂದ, ದೂರದರ್ಶಕದಿಂದ ಆಗುವ ಪ್ರಯೋಜನಗಳನ್ನೆಲ್ಲ ಪ್ರಾತ್ಯಕ್ಷಿಕವಾಗಿ ಬೋಧಿಸುತ್ತಿದ್ದರು. ಪ್ರಕೃತಿಯಲ್ಲಿರುವ ಪಕ್ಷಿ, ಮೃಗ, ವನಪ್ರದೇಶಗಳನ್ನು ನೋಡಿ ಆಸ್ವಾದಿಸುವ ರೀತಿಯನ್ನು ತಿಳಿಸುತ್ತಿದ್ದರು. ಆಹಾರ ಪಾನೀಯಗಳಿಗೇನೂ ಕೊರತೆಯಿರಲಿಲ್ಲ. ವಿದ್ಯಾರ್ಥಿನಿಯರನ್ನು ಹಾಲು-ತುಪ್ಪಗಳಲ್ಲಿ ಮೀಯಿಸುತ್ತಾರೆ ಎಂದು ಜನಸಾಮಾನ್ಯರೂ ಆಡಿಕೊಳ್ಳುವಷ್ಟು

ಸಮೃದ್ಧವಾಗಿತ್ತು ಶಾರದಾ ಸದನ.

ರಮಾಬಾಯಿಯ ಸ್ತ್ರೀ ಶಿಕ್ಷಣದ ಕ್ರಾಂತಿ ಪ್ರಪಂಚದೆಲ್ಲೆಡೆ ಹರಡಿತು. ದೇಶ ವಿದೇಶಗಳ ಅನುಭವ, ಅನವರತ ಅಧ್ಯಯನ, ಮಹಿಳೆಯರ ಬಗೆಗಿನ ಕಾಳಜಿ ಹಾಗೂ ಸುಖೀ ಸಮಾಜದ ಬಗೆಗಿನ ದೂರದರ್ಶಿತ್ವದ ಫಲವಾಗಿ ರಮಾಬಾಯಿಯ ಯೋಜನೆಗಳು ಕಾರ್ಯರೂಪ ಪಡೆಯುತ್ತ ಬಂದವು. 'ಶಾರದಾ ಸದನ' ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿದ್ದಂತೆ ಬೇರೆ ಕಾರ್ಯಗಳಿಗೆ ಅನುವಾದರು ರಮಾಬಾಯಿ. ೧೮೮೯ ಡಿಸೆಂಬರದಲ್ಲಿ ಅವರ "ಸಂಯುಕ್ತ ಸಂಸ್ಥಾನಗಳ ಲೋಕಸ್ಥಿತಿ ಮತ್ತು ಪ್ರವಾಸ ವೃತ್ತಾಂತ" ಎಂಬ ಮರಾಠಿ ಪುಸ್ತಕ ಪ್ರಕಟವಾಯಿತು.

ಇಂಡೋನೇಶಿಯಾದ ರಾಜಕುಮಾರಿ ಕಾರ್ಟಿನಿ ಫ್ರೆಂಚ್ ವಾರ್ತಾ ಪತ್ರಿಕೆಗಳಿಂದ ರಮಾಬಾಯಿ ಹಾಗೂ ಅವಳ ಕಾರ್ಯಗಳ ಬಗ್ಗೆ ತಿಳಿದಳು. ಇಂಡೋನೇಶಿಯಾ ಆಗ ಡಚ್ಚರ ಅಧೀನದಲ್ಲಿತ್ತು. ನಮ್ಮ ದೇಶೀಯ ಸಂಸ್ಥಾನಗಳ ಅರಸರಂತೆ ಅಲ್ಲಿಯ ರಾಜರು ಆಶ್ರಿತ ರಾಜರಾಗಿದ್ದರು. ಅಲ್ಲಿಯ ಪ್ರಜೆಗಳು ಮುಸಲ್ಮಾನರಾಗಿದ್ದುದರಿಂದ ಹುಡುಗಿಯರು ೧೨ ವರ್ಷ ಪ್ರಾಯದ ನಂತರ ಮನೆಯಿಂದ ಹೊರಬರುವುದು ಪಾಪಕರ ಎಂಬ ಭಾವನೆಯಿತ್ತು. ಇಂತಹ ಪರಿಸ್ಥಿತಿಯಲ್ಲಿ ಸ್ತ್ರೀ ಶಿಕ್ಷಣ ಎನ್ನುವುದು ಅಸಾಧ್ಯದ ಮಾತಾಗಿತ್ತು. ರಾಜ "ನಾನಾರೊನಿಗ್ರಂಥ"ನ ಮಗಳು ಈ ಕಾರ್ಟಿನಿ. ಅವಳು ಬಾಲ್ಯದಿಂದ ಡಚ್ ಅಧಿಕಾರಿಗಳ ಪ್ರೇರಣೆಯಿಂದ ಡಚ್ ವಿದ್ಯಾರ್ಥಿಗಳಿಗಾಗಿಯೇ ಇದ್ದ ಪಾಠಶಾಲೆಯಲ್ಲಿ ಫ್ರೆಂಚ್ ಭಾಷಾ ಶಿಕ್ಷಣ ಪಡೆದಳು. ಈ ಸ್ತ್ರೀ ಶಿಕ್ಷಣದ ಬಗ್ಗೆ "ರಮಾಬಾಯಿ ನನ್ನ ಸ್ಫೂರ್ತಿ" ಎಂದು ಹೇಳುತ್ತಲೇ ತನ್ನ ದೇಶದಲ್ಲಿ ಸ್ವಾತಂತ್ರ್ಯ ಹಾಗೂ ಸ್ತ್ರೀ ಶಿಕ್ಷಣದ ಪ್ರಚಾರಕ್ಕಾಗಿ ರಮಾಬಾಯಿಯ ಆದರ್ಶಗಳನ್ನು ಹಂತ ಹಂತವಾಗಿ ಅನುಸರಿಸಿದಳು.

ಇತ್ತ ಇಂಗ್ಲೆಂಡ್‌ನ ರಾಣಿ ವಿಕ್ಟೋರಿಯಾ ರಮಾಬಾಯಿಯ ಸೂಚನೆಯಂತೆ ಭಾರತದಲ್ಲಿ ಸ್ತ್ರೀ ವೈದ್ಯರು ಹಾಗೂ ಮಹಿಳೆಯರ ದವಾಖಾನೆಗಳನ್ನು ಸ್ಥಾಪಿಸುವ ಏರ್ಪಾಡು ಮಾಡಿದಳು.

ಶಾರದಾ ಸದನದಲ್ಲಿ ಬಾಲಿಕೆಯರು ತಮ್ಮ ತಮ್ಮ ಮತ ಪದ್ಧತಿಯಂತೆ ಇರುವುದಕ್ಕೆ ಯಾವ ಆತಂಕವೂ ಇರಲಿಲ್ಲ. ರಮಾಬಾಯಿ ಕ್ರೈಸ್ತ ಮತಾವಲಂಬಿಯಾದರೂ ವಿದ್ಯಾರ್ಥಿಗಳಿಗೆ ಕ್ರೈಸ್ತಮತ ಸ್ವೀಕರಿಸಲೇಬೇಕೆಂಬ ಆಜ್ಞೆ (commitment) ಎಂದೂ ನೀಡಲಿಲ್ಲ. ಸದನದ ಎಲ್ಲರನ್ನು ಅವಳು ಮಾತೆಯಂತೆ ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದರು. ವಿದ್ಯಾರ್ಥಿನಿಯರ ಮತ ವಿಚಾರದಲ್ಲಿ ಸ್ವತಂತ್ರತೆ ಇರಬೇಕೆಂಬುದೇ ಅಮೇರಿಕದ ರಮಾಬಾಯಿ ಅಸೋಸಿಯೇಶನ್‌ನ ನಿಬಂಧನೆಯಾಗಿತ್ತು. ರಮಾಬಾಯಿ ಪ್ರತಿದಿನ ಬೆಳಿಗ್ಗೆ ಐದು ಘಂಟೆಗೆ ಬೈಬಲ್‌ನ ಶಾಸ್ತ್ರಭಾಗವನ್ನು ಓದಿ ಪ್ರಾರ್ಥನೆ ಮಾಡುತ್ತಿದ್ದರು. ಆ

ಸಮಯದಲ್ಲಿ ಕಿಟಕಿ ಬಾಗಿಲೇನೂ ಹಾಕಲಾಗುತ್ತಿರಲಿಲ್ಲ. ಶಾರದಾ ಸದನದ ಬಾಲಿಕೆಯರು ಸಹಜವಾಗಿ ಕೌತುಕದಿಂದ ಇದನ್ನು ಗಮನಿಸಹತ್ತಿದ್ದರು. "ಯದ್ಯದ್ದಾಚರತಿ ಶ್ರೇಷ್ಠಃ ತತ್ತದೇವೇತರೋಜನಾಃ" ಎಂಬಂತೆ ಕೆಲದಿನಗಳಾಗುತ್ತಿದ್ದಂತೆ ಸದನದ ಖಾಯಂ ನಿವಾಸಿಗಳೆಲ್ಲ ಪ್ರಾರ್ಥನೆಯ ವೇಳೆ ಶಾಂತ ಮುದ್ರೆಯಿಂದ ಧ್ಯಾನಮಗ್ನರಾಗುತ್ತಿದ್ದ ರಮಾಬಾಯಿಯವರನ್ನು ಕಂಡು ಆಕೆ ಕೈಮುಗಿದಾಗ ತಾವೂ ನಮಿಸುತ್ತ ಭಕ್ತಿಯಲ್ಲಿ ಲೀನವಾಗುತ್ತಿದ್ದರು. ಪ್ರಾರ್ಥನೆ ಮುಗಿದ ಬಳಿಕ ವಿದ್ಯಾರ್ಥಿನಿಯರಲ್ಲಿ ಒಬ್ಬೊಬ್ಬರನ್ನೇ ಕರೆದು ಮುತ್ತಿಕ್ಕಿ ಆಶೀರ್ವದಿಸುತ್ತಿದ್ದರು ರಮಾಬಾಯಿ.

ಆದರೆ ವಿಪರ್ಯಾಸವೆಂದರೆ ವಿದ್ಯಾರ್ಥಿನಿಯರನ್ನು ಕ್ರೈಸ್ತ ಮತಕ್ಕೆ ಸೇರುವಂತೆ ರಮಾಬಾಯಿ ಬೋಧಿಸುತ್ತಾರೆ ಎಂಬ ಸುದ್ದಿ ತಿಲಕರ 'ಕೇಸರಿ' ಪತ್ರಿಕೆಯಲ್ಲಿ ಪ್ರಕಟವಾಯಿತು. ರಮಾಬಾಯಿ ಅಸೋಸಿಯೇಶನ್ ಸಲಹಾ ಸಮಿತಿಯ ಸದಸ್ಯರಾದ ಮಹಾದೇವ ಗೋವಿಂದ ರಾನಡೆ, ಡಾ. ರಾಮಕೃಷ್ಣ ಭಂಡಾರಕರ್ ಇವರು ಆರಂಭದಿಂದಲೂ ರಮಾಬಾಯಿಯ ಸ್ತ್ರೀ ವಿದ್ಯಾಭ್ಯಾಸ, ಅನಾಥ ವಿಧವಾ ಪಾಲನೆ ಇವೆಲ್ಲ ಉದ್ದೇಶದಿಂದ ಕೂಡಿದ ಶಾರದಾ ಸದನದ ಕಾರ್ಯಗಳಲ್ಲಿ ಉತ್ತಮ ಭಾವನೆಯುಳ್ಳವರಾಗಿ ಸಾಧ್ಯವಿದ್ದ ಸಹಾಯವನ್ನೆಲ್ಲ ಮಾಡುತ್ತಿದ್ದರು. ಆದರೆ ರಮಾಬಾಯಿ ವಿದ್ಯಾರ್ಥಿನಿಯರಿಗೆ ಕ್ರೈಸ್ತಮತ ಬೋಧನೆ ಮಾಡುವರೆಂಬ ಗಾಳಿಸುದ್ದಿ ಕೇಳಿ ಅವರು ಮನಸ್ಸನ್ನು ಕೆಡಿಸಿಕೊಂಡರು. ಪ್ರಾರ್ಥನಾ ವೇಳೆಯಲ್ಲಿ ವಿದ್ಯಾರ್ಥಿನಿಯರು ಅಲ್ಲಿ ಬಾರದಂತೆ ಮಾಡಬೇಕೆಂದು ಸೂಚಿಸಿದರು. ತಾನಾಗಿ ಅವರನ್ನು ಆಹ್ವಾನಿಸದೆ ಇರುವಾಗ ಬರಬೇಡಿ ಎಂದು ತಡೆಯುವುದು ತನ್ನಿಂದ ಅಸಾಧ್ಯದ ಮಾತು ಎಂಬುದಾಗಿ ರಮಾಬಾಯಿ ಅಭಿಪ್ರಾಯ ವ್ಯಕ್ತಪಡಿಸಿದರು. ಆಗ ಸಲಹಾ ಸಮಿತಿಯ ಸದಸ್ಯರು ಸಲಹಾ ಸಮಿತಿಗೆ ತಮ್ಮ ರಾಜಿನಾಮೆ ಬರೆದುಕೊಟ್ಟರು. ಆ ಸಂದರ್ಭದಲ್ಲಿ 'ಕೇಸರಿ' ಪತ್ರಿಕೆಯ ಆರೋಪವನ್ನು ಖಂಡಿಸಿ ಸತ್ಯ ಸಂಗತಿಯನ್ನು ವಿಷದ ಪಡಿಸುವ ದೀರ್ಘವಾದ ಲೇಖನವೊಂದನ್ನು ರಮಾಬಾಯಿ ಪೂನಾದ 'ಕೇಸರಿ' ಪತ್ರಿಕೆಯಲ್ಲಿ ಪ್ರಕಟಿಸಿದರು. ಮುಂದೆ ೧೮೮೯ನೇ ಡಿಸೆಂಬರ್‌ನಲ್ಲಿ ೨೯ರಂದು ಸಾಮಾಜಿಕ ಪರಿಷತ್ತು ಸೇರಿತು. ಕಾಂಗ್ರೆಸ್ ಅಧ್ಯಕ್ಷ ಸರ್ ಬೆಡರ್ ಬರ್ನ್‌ರವರು ಭಾಗವಹಿಸಿದ್ದರು. ಡಾ. ಭಂಡಾರಕರ್, ಶ್ರೀ ಸುಬ್ರಹ್ಮಣ್ಯ ಅಯ್ಯರ್, ನ್ಯಾಯಮೂರ್ತಿ ತೆಲಂಗ್ ಮುಂತಾದ ಮುಂದಾಳುಗಳು ಸೇರಿದ್ದರು. ನ್ಯಾಯಮೂರ್ತಿ ತೆಲಂಗ್‌ರು ಸಾಮಾಜಿಕ ಪರಿಷತ್ತಿನ ಅಧ್ಯಕ್ಷರಾಗಿದ್ದರು. ವಿಶೇಷ ಆಮಂತ್ರಣದ ಮೇರೆಗೆ ರಮಾಬಾಯಿ ಉಪಸ್ಥಿತರಿದ್ದರು. ಆಗ ಸುಬ್ರಹ್ಮಣ್ಯಂ ಅಯ್ಯರವರು "ವಿಧವಾ ಕೇಶ ವಪನ'ದ ಗೊತ್ತುವಳಿ ಮಂಡಿಸಿದರು. ರಮಾಬಾಯಿ ಇದನ್ನು ಅನುಮೋದಿಸಿ ಠರಾವಿನ ಪುಷ್ಟೀಕರಣದ ಭಾಷಣದಲ್ಲಿ ಹೀಗೆಂದರು :

ಬಂಧುಗಳೇ, ನಮ್ಮ ದೇಶದಲ್ಲಿ ಲಕ್ಷಗಟ್ಟಲೆ ವಿಧವೆಯರಿದ್ದಾರೆ. ಈ ಒಪ್ಪಂದ

ಇವರಿಗಾಗಿ ಜಾರಿಗೆ ಬರಬೇಕು. ಇದರಲ್ಲಿ ನಾನೊಂದು ವಿಶೇಷ ಸೂಚನೆ ಮಾಡಲಿಚ್ಛಿಸುತ್ತೇನೆ. ೧೮ ವರ್ಷ ಮೇಲ್ಪಟ್ಟವರು ಕೇಶ ವಪನ ಮಾಡಿಸಬಹುದು ಎಂದು ಇದ್ದುದನ್ನು ಸಂಪೂರ್ಣ ತೆಗೆದು ಎಲ್ಲ ವಿಧವೆಯರಿಗೆ ಅದು ಅನ್ವಯವಾಗುವಂತಿರಬೇಕು. ಪ್ರಾಯಕ್ಕೆ ಬಂದ ವಿಧವೆಯರಿಗೆ ತಾವು ಹೇಗಿರಬೇಕೆನ್ನುವ ಸ್ವಾತಂತ್ರ್ಯವಿರಬೇಕು, ತನ್ನ ಕೂದಲು ಬೋಳಿಸುವಲ್ಲಿ ಯಾವುದೇ ಒತ್ತಡಗಳಿರಬಾರದು. ನಾನೂ ಅನೇಕ ವಿಧವೆಯರನ್ನು ಕಂಡಿದ್ದೇನೆ. ಅವರಾರೂ ತಮ್ಮ ಕೂದಲು ಬೋಳಿಸುವುದಕ್ಕೆ ಇಚ್ಛಿಸುವುದಿಲ್ಲ. ಮುಂಡನ ಮಾಡುವುದು ಬೇಡವೆಂದೇ ಅವರ ಅಭಿಪ್ರಾಯವಾಗಿತ್ತು. ಆದರೆ ಬಲಾತ್ಕಾರಪೂರ್ವಕವಾಗಿ ಅವರಿಗೆ ಕೇಶಮುಂಡನ ಮಾಡಿಸಲಾಗುತ್ತಿತ್ತು. ಇದು ಒಂದು ಭ್ರಮೆಯ, ಕ್ರೂರತೆಯ ಪರಮಾವಧಿ ಎಂದು ಬೇರೆ ನಾನು ಹೇಳಬೇಕಾಗಿಲ್ಲ. ಒಂದು ವೇಳೆ ಹೆಂಡತಿ ತೀರಿಕೊಂಡರೆ ನಿಮ್ಮಲ್ಲಿ ಎಷ್ಟು ಮಂದಿ ಕೇಶ ಮುಂಡನ ಮಾಡಿಸಿಕೊಳ್ಳಲು ಸಿದ್ಧರಿದ್ದೀರಿ? ಗೃಹಸ್ಥರೇ, ನೀವೇ ಹೇಳಿ. ಈ ತರದ ಅತ್ಯಾಚಾರ ನಿಮ್ಮ ಮಗಳ ವಿಚಾರದಲ್ಲೇ ಆದರೆ ನೀವು ಅವರ ಸಹಾಯಕ್ಕೆ ಹೋಗಬೇಡವೇ? ಈ ಸಭೆಯಲ್ಲಿ ವಾಕ್ಸ್ವಾತಂತ್ರ್ಯದ ಬಗ್ಗೆ ಮಾತು ಬರುತ್ತಿದೆ. ಆದರೆ ಗಂಡಸರು ಮೊದಲು ಸ್ತ್ರೀಯರಿಗೆ ಅಂತಹ ಸ್ವಾತಂತ್ರ್ಯವನ್ನು ಕೊಡಬೇಕಾಗಿದೆ. ಅನೇಕ ಕಡೆ ತಮ್ಮ ನೆಂಟರು–ಬಂಧುಗಳ ಒತ್ತಾಯದಿಂದ ತಂದೆ ಆದವನು ಮಗಳ ಕೇಶ ಮುಂಡನಕ್ಕೆ ಅವಕಾಶ ಮಾಡಿದ್ದು ಕೇಳಿದ್ದೇನೆ. ನೋಡಿರುತ್ತೇನೆ ಕೂಡ. ಹೆಂಗಸರಿಗೆ ಕಾನೂನು ವಿಚಾರ ಗೊತ್ತಿಲ್ಲದೇ ಕಾನೂನಿನ ಆಶ್ರಯ ಪಡೆಯುವ ಧೈರ್ಯವಿರುವುದಿಲ್ಲ. ಬಲ ಪ್ರಯೋಗದ ಮುಂಡನಕ್ಕೆ ಮೂರು ವರ್ಷಗಳ ಕಠಿಣ ಶಿಕ್ಷೆಯನ್ನು ಕಾನೂನು ವಿಧಿಸಿದೆ. ಮೊದಲು ಕಾನೂನಿನ ಅರಿವನ್ನು ಮಹಿಳಾ ಜನರಲ್ಲಿ ಮೂಡಿಸಿರಿ. ನನ್ನ ಮಾತು ಇಷ್ಟೆ ಈ ಗೊತ್ತುವಳಿಯ ನಂತರ ಖಂಡಿತವಾಗಿ ಅದರ ಪರಿಪಾಲನೆ ಮಾಡಬೇಕಾಗಿದೆ. ನೀವಾಗಿ ಕೇಶ ವಪನ ನಿಲ್ಲಿಸಿದಿರಿ ಅಂದಾಗ ನಿಮ್ಮ ಮನೆ ಹೆಂಗಸರು ಸಂತೋಷವಾಗಿ ಆತ್ಮ ಸಮಾಧಾನವಾಗಿ ತಮ್ಮ ಕೇಶದ ದಾನ ಮಾಡುತ್ತಾರೆ.

ಪಂ. ರಮಾಬಾಯಿ ಶಾರದಾ ಸದನದಲ್ಲಿ ಅನಾಥ ಸ್ತ್ರೀಯರ ಸಂಗೋಪನೆಯಲ್ಲಿ ಸರ್ವ ವಿಧದಿಂದ ದುಡಿಯುತ್ತಿದ್ದರು. ಅಮೇರಿಕದ ಎಸೋಸಿಯೇಶನ್‌ನವರು ಕೊಡುತ್ತಿದ್ದ ಧನಸಹಾಯದ ಅರ್ಧ ವಯಸ್ಸು ಮುಗಿದಿತ್ತು. ಇನ್ನು ಸಾಧ್ಯವಾದಷ್ಟು ಅಮೇರಿಕದ ಧನಸಹಾಯ ಪಡೆಯುವುದನ್ನು ಬಿಟ್ಟು ಶಾರದಾ ಸದನ ಭಾರತೀಯರಿಂದಲೇ ನಡೆಸಲ್ಪಡಬೇಕೆಂದು ಅನೇಕರೊಡನೆ ರಮಾಬಾಯಿ ಪ್ರಸ್ತಾಪಿಸಿದರು. ಆದರೆ ಇದು ವಿಫಲವಾಯಿತು. ಸ್ವತಂತ್ರವಾಗಿ ಶಾರದಾ ಸದನವನ್ನು ನಡೆಸಲು ಕಾರ್ಯ ಯೋಜನೆ ಹಾಕಬೇಕಾಗಿತ್ತು. ಅದಕ್ಕಾಗಿ ಪುಣೆಯಿಂದ ೩೪ ಮೈಲಿ ದೂರದ ಖೇಡ್‌ಗಾಂವ್‌ನಲ್ಲಿ ನೂರು ಎಕರೆ ಬಂಜರು ಜಮೀನು ಖರೀದಿಸಿದರು. ಅಲ್ಲಿ ಕೃಷಿ–ಕೈಗಾರಿಕೆ ನಡೆಸಿ ತನ್ನ ಸದನವನ್ನು ನಡೆಸಬಹುದಾಗಿ ಯೋಚಿಸಿದರು. ಅಲ್ಲಿ ಗುಡಿಸಲುಗಳ ನಿರ್ಮಾಣ ಆರಂಭಿಸಿದಾಗ ೧೮೯೭ರಲ್ಲಿ ಮಧ್ಯ ಭಾರತದಲ್ಲಿ ಭಯಂಕರ ಕ್ಷಾಮವು ತಲೆದೋರಿ ಸಹಸ್ರಾರು ಮಂದಿ

ಅನ್ನಾಹಾರವಿಲ್ಲದೆ ಸಾಯುತ್ತಿದ್ದ ಸುದ್ದಿ ಬೇರೆ. ಆದರೆ ಸಾವಿರಾರು ನಿರಾಶ್ರಿತರಿಗೆ ಆಶ್ರಯ ಕೊಡುವಷ್ಟು ಹಣ ಬಲ ಅವರಲ್ಲಿ ಇರಲಿಲ್ಲ. ಶಕ್ತಿಯೂ ಇರಲಿಲ್ಲ. ಆದರೆ ರಮಾಬಾಯಿ ತಾನು ಸ್ವತಃ ಕ್ಷಾಮಕಾಲದ ಯಾತನೆ ಅನುಭವಿಸಿದವರು. ಉಪವಾಸದಿಂದ ಎಷ್ಟು ಕಷ್ಟ ಬರುತ್ತದೆಂಬುದು ಅವರಿಗೆ ತನ್ನ ಪೂರ್ವಕಾಲದ ಜೀವನದಲ್ಲಿ ಅನುಭವವೇದ್ಯವಾಗಿತ್ತು. ಮದ್ರಾಸಿನ ಕ್ಷಾಮದಲ್ಲಿ ಕಾಡಿನ ಸೊಪ್ಪು, ಹಣ್ಣು ಸೇವಿಸಿ ಜೀವನ ಕಳೆದಿದ್ದರು. ಒಂದು ರೊಟ್ಟಿಯ ಚೂರಿಗಾಗಿ ನೆರೆಮನೆಯಲ್ಲಿ ಯಾಚಿಸುವುದು ಎಂತಹ ದಾರುಣ ಸ್ಥಿತಿ! ಇದರ ಪ್ರತ್ಯಕ್ಷಾನುಭವ ಅಮ್ಮ ಲಕ್ಷ್ಮೀಬಾಯಿಯ ಸಾವಿನ ಸಂದರ್ಭದಲ್ಲಾಗಿತ್ತು. ಹೀಗಾಗಿ ಮಧ್ಯಭಾರತದ ಕ್ಷಾಮ ಅವರಲ್ಲಿ ವೇದನೆಯುಂಟು ಮಾಡಿತು. ಆದರಂತೆ ನಿರಾಶ್ರಿತರ ಸಹಾಯಕ್ಕಾಗಿ ಅಲ್ಲಿಗೆ ಧಾವಿಸಿದರು.

ಅದು ಮಳೆಗಾಲವಾಗಿತ್ತು. ಅನೇಕ ಜನರು ಆಶ್ರಯವಿಲ್ಲದೆ ಕಾಡುಗುಡ್ಡೆಗಳಲ್ಲಿ ತಿರುಗುತ್ತಿದ್ದರು. ಅವರಿಗೆ ಮೈತುಂಬ ಬಟ್ಟೆಗಳಿರಲಿಲ್ಲ. ಹಸಿವು, ಮಳೆಗಾಳಿಗೆ ಸಂಕಟ ತಾಳಲಾರದೆ ಜನರು ಗೋಡೆಗೆ, ಮರಕ್ಕೆ ಅಂಟಿಕೊಂಡು ನಿಲ್ಲುತ್ತಿದ್ದರು. ಕೆಲವರು ತಮ್ಮ ಮಕ್ಕಳನ್ನು ಒಂದು ರೂಪಾಯಿಗೆ ಮಾರುತ್ತಿದ್ದರು. ಕೆಲವೊಂದು ಬಾರಿ ಆಹಾರ ಸಿಕ್ಕಿದರೂ ತಮ್ಮ ಹಸಿವಿಗೆ ಸಾಲುತ್ತಿರಲಿಲ್ಲ. ಹೀಗಾಗಿ ಮಕ್ಕಳ ಸ್ಥಿತಿ ಶೋಚನೀಯವಾಯಿತು. ಕೆಲವೆಡೆ ಸರಕಾರದ ರಿಲೀಫ್ ಕಾಮಗಾರಿಗಳಿದ್ದವು. ಅಲ್ಲಿಯೂ ವ್ಯವಸ್ಥೆ ಸರಿ ಇರಲಿಲ್ಲ. ಸಗಕಾರೀ ಅಧಿಕಾರಿಗಳು, ಡಾಕ್ಟರ್‌ಗಳು, ಕಾಮಗಾರಿಗೆ ಭೇಟಿಕೊಟ್ಟು ಹಿಂದಿರುಗುವಾಗಲೇ ಅನಾಥ ಅಬಲೆಯರ ಮಾನಭಂಗ! ಅಲ್ಲದೆ ಸ್ವಚ್ಛತಾ ಅಭಾವದಿಂದ ಸಾಂಕ್ರಾಮಿಕ ರೋಗಗಳು ಬೇರೆ. ನಿರಾಶ್ರಿತರು ಇದ್ದಲಿನ ರಾಶಿ ಮೇಲೆ ಮಲಗುವ ದುಸ್ಥಿತಿ. ಸರಕಾರದಿಂದ ಹಿಟ್ಟು, ಉಪ್ಪು ಸಿಗುತ್ತಿದ್ದವು. ಹೊಟ್ಟೆಗಿಲ್ಲದೆ ಮಕ್ಕಳು ಸಾಯುವಾಗ ತಂದೆ-ತಾಯಿಗಳು ದುಃಖಪಡುವ ಸ್ಥಿತಿಯಲ್ಲೂ ಇರಲಿಲ್ಲ. ಸ್ತ್ರೀಯರ ಮಾನಭಂಗ, ದೂರದ ದೇಶಗಳಿಗೆ ಮಾರಾಟ. ಹೀಗೆ ಮುಂಬೈ, ಕಲ್ಕತ್ತಾದ ಪುಂಡರಿಗೆ ಕ್ಷಾಮ ಕಾಲವು ವೃತ್ತಿಯನ್ನೇ ಕೊಟ್ಟಿತ್ತು.

ಇದನ್ನೆಲ್ಲ ಕಂಡ ರಮಾಬಾಯಿ ಹೃದಯ ಕರಗಿ ಹೋಯಿತು. ನಿರಾಶ್ರಿತರನ್ನು ನರಕ ಯಾತನೆಗಳಿಂದ ಬಿಡಿಸಿ ಅವರ ಯೋಗಕ್ಷೇಮದ ದೃಢ ನಿರ್ಧಾರದಿಂದ ಅನ್ನ, ಬಟ್ಟೆ, ದವಸ ಧಾನ್ಯಗಳನ್ನು ಎಂಟು ಎತ್ತಿನ ಗಾಡಿಗಳಲ್ಲಿ ಒಯ್ದು ಹಂಚಿದರು. ಅವರ ಕಷ್ಟ ವಿಚಾರಿಸುತ್ತ ಬುಂದೇಲಖಂಡ, ಸೋಹಾಗರಪುರ, ಜಬ್ಬಲ್‌ಪುರದಲ್ಲೆಲ್ಲ ಸಂಚರಿಸಿದರು. ಕ್ಷಾಮ ಪೀಡಿತ ಪ್ರದೇಶದಲ್ಲಿ ೩,೦೦೦ ನಿರಾಶ್ರಿತರನ್ನು ಕರಕೊಂಡು ಬಂದರು. ಇಷ್ಟು ಮಂದಿಗೆ ಆಹಾರ, ವಸತಿ ಒದಗಿಸುವುದು ಅಸಾಮಾನ್ಯ ಕೆಲಸವೇ. ದೇವರ ಮೇಲೆ ಭಾರ ಹಾಕಿದರು ರಮಾದೇವಿ. ನಿರಾಶ್ರಿತರ ಪುನರ್ವಸತಿ ಆರಂಭಿಸಿದರು. ಈ ಮಹಾಕಾರ್ಯಕ್ಕೆ ಸರಕಾರದ ಬೆಂಬಲವಾಗಲೀ, ಶ್ರೀಮಂತರಿಂದ ಧನ ಸಹಾಯವಾಗಲೀ ಸಿಗುತ್ತಿರಲಿಲ್ಲ. ಕೆಲವು ವಿದೇಶೀಯರು ಸಹಾಯ ಕೊಡುತ್ತಿದ್ದರು. ಅದೂ ರಮಾಬಾಯಿಯವರ ಮಹತ್ಕಾರ್ಯಗಳ

ಬಗ್ಗೆ ಗೊತ್ತಿದ್ದುದರಿಂದ.

೧೮೯೭ ಬೇಸಿಗೆಯಲ್ಲಿ ಪೂನಾದಲ್ಲಿ ಪ್ಲೇಗ್ ಬಂತು. ರೋಗಗ್ರಸ್ತರಿಗೆ ಚಿಕಿತ್ಸೆಯ ನೆವದಲ್ಲಿ ಬ್ರಿಟಿಷ್ ಅಧಿಕಾರಿಗಳು ಸಾರ್ವಜನಿಕರನ್ನು ಕ್ರೂರವಾಗಿ ಹಿಂಸಿಸತೊಡಗಿದರು. ಇದನ್ನು ತಡೆಯಲಾರದೆ ಚಾಫೇಕರ ಬಂಧುಗಳು ರಾಂಡ್ ಸಾಹೇಬ್‌ನಿಗೆ ಗುಂಡಿಕ್ಕಿದ್ದರು. ದವಾಖಾನೆಗಳಲ್ಲೂ ಅನೇಕ ದೌರ್ಜನ್ಯ ನಡೆಯುತ್ತಿದ್ದವು. ಅಧಿಕಾರ ಶಾಹಿತ್ವದಿಂದ ಹೆಣ್ಣುಮಕ್ಕಳು ಬಲಿಯಾದರು. ಇದೆಲ್ಲದರ ಬಗ್ಗೆ ಸುಮ್ಮನಿರಲಾಗದೆ ರಮಾಬಾಯಿ 'ಬಾಂಬೆ ಗಾರ್ಡಿಯನ್' ಪತ್ರಿಕೆಗೆ ದೀರ್ಘ ಲೇಖನವನ್ನು ಬರೆದರು. ಇದರ ಪ್ರತಿಧ್ವನಿ ಲಂಡನ್‌ನ ಪಾರ್ಲಿಮೆಂಟ್‌ನಲ್ಲೂ ಮೊಳಗಿತು. ಬ್ರಿಟಿಷ್ ಅಧಿಕಾರಿಗಳ ವರ್ತನೆಯನ್ನು ಇಂಗ್ಲೆಂಡಿನ ರಾಜಕೀಯ ಪಕ್ಷಗಳು ಖಂಡಿಸಿದವು. ಇತ್ತ ಪೂನಾದಲ್ಲಿ ಅನೇಕರಿಗೆ ಅಧಿಕಾರಿಗಳ ಖಂಡನೆ ಮಾಡಿದ್ದಕ್ಕೆ ಸೆರೆಮನೆ ವಾಸವಾಯಿತು.

ಈ ಮಧ್ಯೆ ಖೇಡ್‌ಗಾಂವ್‌ನಲ್ಲಿ ವಸತಿ ನಿರ್ಮಾಣ ಕಾರ್ಯ ನಡೆಯುತ್ತಲೇ ಇತ್ತು. ಪ್ಲೇಗ್ ನಿಯಂತ್ರಣಾಧಿಕಾರಿಗಳು ಶಾರದಾ ಸದನದ ಜನರನ್ನು ಊರಿಂದ ಹೊರಗೆ ಸಾಗಿಸಬೇಕೆಂದು ಆಜ್ಞೆ ಕೊಟ್ಟರು. ಹೀಗಾಗಿ ಪೂನಾದ ಶಾರದಾ ಸದನ ಖೇಡ್‌ಗಾಂವ್‌ಗೆ ವರ್ಗಾವಣೆಯಾಯಿತು.

ಈಗ ಈ ವೇಳೆಗೆ ಅಮೇರಿಕದ ರಮಾಬಾಯಿ ಅಸೋಸಿಯೇಶನ್ ಶಾರದಾ ಸದನಕ್ಕೆ ಕೊಡುತ್ತಿದ್ದ ಆರ್ಥಿಕ ಸಹಾಯದ ಅವಧಿ ಮುಗಿದಿತ್ತು. ಹೀಗಾಗಿ ರಮಾಬಾಯಿ ಅಮೇರಿಕಕ್ಕೆ ತೆರಳಿ ಮತ್ತೊಮ್ಮೆ ಅಸೋಸಿಯೇಶನ್‌ನ್ನು ಪುನರುಜ್ಜೀವನಗೊಳಿಸಬೇಕಾಗಿತ್ತು. ಈಗ ಅಸೋಸಿಯೇಶನ್ ನಿಯಮಾವಳಿಗಳನ್ನೂ ಬದಲಾಯಿಸಬೇಕಿತ್ತು. ಹಾಗಾಗಿ ಶಾರದಾ ಸದನದ ಜವಾಬ್ದಾರಿಯನ್ನು ೧೮೯೮ರಲ್ಲಿ ಸುಂದರೀಬಾಯಿ ಎಂಬವಳಿಗೆ ಒಪ್ಪಿಸಿ ರಮಾಬಾಯಿ ಮತ್ತೆ ಅಮೇರಿಕಾ ಪ್ರವಾಸ ಕೈಗೊಂಡರು.

## ಮನೋರಮಾ

ಪಂ. ರಮಾಬಾಯಿಯ ಜೀವನದ ಒಂದು ಆಧಾರವಾದ ಮಗಳು ಮನೋರಮೆ ಬಗ್ಗೆ ನಾವು ತಿಳಿದುಕೊಳ್ಳಲೇಬೇಕು. ಎಂಟು ತಿಂಗಳ (ಜನನ : ೧೬-೪.೧೮೮೧) ಮಗು ಕಾಚಾರದಿಂದ ಮದರಾಸು, ಅಲ್ಲಿಂದ ಪೂನಾಗೆ ತಿರುಗಬೇಕಾಯಿತು. ಆದರೆ ಬೇರೆ ಬೇರೆ ದೇಶಗಳ ಹವಾಗುಣದಿಂದ ಮನೋರಮೆಯ ದೇಹದ ಮೇಲೇನೂ ಪರಿಣಾಮ ಆನಿಸಲಿಲ್ಲ. ಪೂನಾದಿಂದ ಎರಡೇ ವರ್ಷಗಳಲ್ಲಿ ಇಂಗ್ಲೆಂಡಿಗೆ ತಾಯಿಯೊಂದಿಗೆ ತೆರಳಬೇಕಾಯಿತು. ಆಮೇಲೆ ಮತ್ತೆ ಮೂರು ವರುಷಗಳ ಬಳಿಕ ಅಮೇರಿಕಾ ದೇಶಕ್ಕೆ ಪ್ರಯಾಣ. ಆದರೆ ರಮಾಬಾಯಿ ಅವಳನ್ನು ಅವಳ ವಿದ್ಯಾಭ್ಯಾಸಕ್ಕೆ ತಡೆ ಆಗಬಾರದೆಂದು ಹಡಗಿನ ಪರಿಚಾರಿಕೆ

ಜತೆಗೆ ಮತ್ತೆ ಇಂಗ್ಲೆಂಡಿಗೆ ಕಳುಹಿಸಿದರು. ರಮಾಬಾಯಿ ಅಮೇರಿಕದ ಪ್ರವಾಸ ಮುಗಿಸಿ ಜಪಾನ್ ಮಾರ್ಗವಾಗಿ ಭಾರತಕ್ಕೆ ಬರುವಾಗ ತಾಯಿ ಭೇಟಿಗೆಂದು ಮನೋರಮೆಯನ್ನು ಭಾರತಕ್ಕೆ ಕರೆತಂದಿದ್ದರು. ಅವಳ ಬಾಲ್ಯ ಇಂಗ್ಲೆಂಡಿನಲ್ಲಿ ಆಗಿದ್ದರಿಂದ ಅವಳಿಗೆ ಅಲ್ಲಿಯ ರೀತಿನೀತಿಗಳು ಅಭ್ಯಾಸವಾಗಿದ್ದವು. ಮರಾಠಿ ಭಾಷೆ ಬರುತ್ತಿರಲಿಲ್ಲ. ಆದರೂ ಮಹಾರಾಷ್ಟ್ರೀಯರ ಧ್ಯೇಯತೆ, ಬಂಗಾಳಿಗಳ ಕೌಶಲ್ಯ ಈ ಎರಡೂ ಗುಣ ಈಕೆಯಲ್ಲಿತ್ತು. ತಂದೆ ಬಿಪಿನ್ ಬಿಹಾರಿ ಮೇಧಾವಿಯನ್ನು ಕಂಡವಳಲ್ಲವಾದರೂ ಅವರ ಡೈರಿಯ ಒಂದು ಹಾಳೆಯನ್ನು ಪ್ರೀತಿಯಿಂದ ಜೋಪಾನವಾಗಿ ಇರಿಸಿಕೊಂಡಿದ್ದಳು. ಅದರಲ್ಲಿ ಮನೋರಮೆಯ ಜನ್ಮದ ವಿಚಾರವಿತ್ತು.

ರಮಾಬಾಯಿ ಇಂಗ್ಲೆಂಡ್‌ನ 'ವಾಂಟೇಜ್'ನಲ್ಲಿದ್ದಾಗ ಅಲ್ಲಿಯ ಕಾನ್ವೆಂಟ್ ಸಿಸ್ಟರ್ಸ್ ಪುಟ್ಟ ಮನೋರಮೆಯನ್ನು ಪ್ರೀತಿಯಿಂದ ಸಲಹಿದರು. ಸಣ್ಣ ಮಕ್ಕಳಿಗೆ 'ನೊ-ಎಂಟ್ರಿ' ಆಗಿದ್ದ ಕಾನ್ವೆಂಟ್‌ನಲ್ಲಿ ರಮಾಬಾಯಿಯ ಕಾರಣದಿಂದಾಗಿ ಮನೋರಮೆಯ ಸೇರ್ಪಡೆಗೆ ಯಾವ ತೊಂದರೆಯೂ ಆಗಲಿಲ್ಲ. ಬಾಲ್ಯದಲ್ಲಿ ಮನೋರಮೆ ಬಹಳ ಕ್ಷೀಣ ಗಾತ್ರದವಳು. ಆದರೂ ಭಗಿನೀ ಸಮಾಜ ಹೆಚ್ಚಿನ ಎಚ್ಚರದಿಂದ ನೋಡಿಕೊಂಡಿತ್ತು. ಪರಕೀಯರಾದರೂ ಮನೋರಮೆಯನ್ನು ತಾಯಿಗೆ ಸಮಾನವಾದ ಪ್ರೀತಿಯಿಂದ ಕಾಣುತ್ತಿದ್ದರು. ಕಾನ್ವೆಂಟ್‌ನಲ್ಲಿ 'ಸಿಸ್ಟರ್ ಜೆರಾಲ್ಡೀನ್' ಎಂಬವಳು ಮನೋರಮೆಯನ್ನು ಅತಿ ಪ್ರೀತಿಯಿಂದ ನೋಡಿ ಕೊಳ್ಳುತ್ತಿದ್ದಳು. ಅವಳಿಗೆ ಮನೋರಮೆ (ಡಿಯರ್ ಹೋಲ್ಡ್ ಗ್ರಾಂಡ್‌ಮ) ಪ್ರೀತಿಯ ಅಜ್ಜಮ್ಮ ಎನ್ನುತ್ತಿದ್ದಳು. ಜೆರಾಲ್ಡೀನ್ ಮನೋರಮೆಯನ್ನು ತೊಡೆ ಮೇಲೆ ಕುಳ್ಳಿರಿಸಿ ಕ್ರಿಸ್ತನ ಉಪದೇಶ ಸಾರದ ಕಥೆಗಳನ್ನು ಸಾರವತ್ತಾಗಿ ಹೇಳಿಕೊಡುತ್ತಿದ್ದಳು. ರಮಾಬಾಯಿ ಮಗಳನ್ನು 'ಬಾಬಿ' ಎಂದೇ ಕರೆಯುತ್ತಿದ್ದರು. ದಕ್ಷಿಣಕನ್ನಡ ಚಿತ್ಪಾವನಿ ಭಾಷೆಯಲ್ಲಿ (ಹಳೇ ಮರಾಠಿ) ಬಾಬಿ ಅನ್ನುವ ಪ್ರಯೋಗವಿದೆ. ಪ್ರೀತಿಯಿಂದ ಕರೆಯುವ nick name ಅದು. ರಮಾಬಾಯಿ ತಾನು ಬರೆದ 'ಸ್ತ್ರೀ ಧರ್ಮನೀತಿ' ಎಂಬ ಮರಾಠಿ ಪುಸ್ತಕದಲ್ಲಿ ಹಾಗೂ ಪತ್ರ ವ್ಯವಹಾರದಲ್ಲಿ ದಕ್ಷಿಣಕನ್ನಡದ ಚಿತ್ಪಾವನರ ಭಾಷೆಯಾದ ಮರಾಠಿಯ ಪ್ರಭಾವ ತುಂಬ ಕಂಡುಬರುತ್ತದೆ.

ಮನೋರಮೆ ಪ್ರಾಥಮಿಕ-ಮಾಧ್ಯಮಿಕ ವಿದ್ಯಾಭ್ಯಾಸಗಳನ್ನೆಲ್ಲ ಇಂಗ್ಲೆಂಡ್, ಅಮೇರಿಕದಲ್ಲೇ ಮಾಡಿಕೊಂಡಿದ್ದಳು. ಒಂದೊಂದು ಬಾರಿ ಭಾರತಕ್ಕೆ ಬಂದು ತಾಯಿಯನ್ನು ಕಾಣುತ್ತಿದ್ದಳು. ಪುಣೆಯ ಶಾರದಾ ಸದನದ ಮತ್ತು 'ಎಫಿನೆನಿ' ಕಾನ್ವೆಂಟ್‌ನಲ್ಲಿ ಕೆಲಕಾಲ ಇದ್ದಳು. ೧೮೯೪ರಲ್ಲಿ ಮನೋರಮೆ ಪುನಃ ವಿದೇಶಕ್ಕೆ ಹೋದಳು. ಕಾಲೇಜು ಶಿಕ್ಷಣ ಅಲ್ಲೇ ಪೂರೈಸಬೇಕೆಂಬ ಇಚ್ಛೆಯಿತ್ತು. ಅಮೇರಿಕದಲ್ಲಿ ಮೂರು ವರ್ಷ ಓದು ಆಗುತ್ತಿದ್ದಂತೆ ಪಂ. ರಮಾಬಾಯಿ ಒಮ್ಮೆಲೇ ಅಸ್ವಸ್ಥರಾದರು. ಶಾರದಾ ಸದನ ಆಗ ಖೇಡ್‌ಗಾಂವ್‌ದಲ್ಲಿತ್ತು. ತನ್ನ ವಿದ್ಯಾಭ್ಯಾಸವನ್ನು ಮಧ್ಯದಲ್ಲಿಯೇ ಬಿಟ್ಟು ಮನೋರಮೆಯ ೧೯೦೦ರಲ್ಲಿ

ಖೇಡಗಾಂವ್‌ಗೆ ಬಂದಳು.

ಶಾರದಾ ಸದನದ ಕಾರ್ಯ ವ್ಯಾಪ್ತಿ ಆಗ ಬಹಳ ಹುರುಪಿನಿಂದ ಸಾಗಿತ್ತು. ಹುಡುಗಿಯರ ಮಾಧ್ಯಮಿಕ ಶಾಲೆ ಆರಂಭವಾಗಿತ್ತು. ವಿದೇಶದಲ್ಲಿ ಪಡೆದ ಶಿಕ್ಷಣದ ಅನುಭವ-ಆಧಾರದ ಮೇಲೆ ಶಾರದಾ ಸದನದ ಜವಾಬ್ದಾರಿಯನ್ನು ಮನೋರಮೆ ವಹಿಸಿಕೊಂಡಳು. ಕಾಲೇಜಿನಲ್ಲಿ ಪದವಿ ಪಡೆಯಬೇಕೆಂಬ ಇಚ್ಛೆ ಮನೋರಮೆಗೆ ಇತ್ತು. ಖೇಡ್‌ಗಾಂವ್‌ನ ಕೆಲಸಗಳನ್ನು ಮಾಡುತ್ತಿದ್ದ ಹಾಗೆಯೇ ಪೂನಾದ ಡೆಕ್ಕನ್ ಕಾಲೇಜು ಸೇರಿ ಕ್ರಮವಾಗಿ ಶಿಕ್ಷಣ ಪಡೆಯಲಾರಂಭಿಸಿದಳು. ಖೇಡಗಾಂವದಿಂದ ಪುಣೆಗೆ ಇರುವ ೬೪ ಮೈಲಿ ದೂರವನ್ನು ದಿನವೂ ತಾನೇ ಕಾರು ನಡೆಸಿ ತಲಪುತ್ತಿದ್ದಳು. ಎಂ.ಎ. ಮಾಡುವ ಆಕಾಂಕ್ಷೆಯಿತ್ತು. ಆದರೆ ಹಗಲು-ರಾತ್ರಿ ಎನ್ನದೆ ಮಾಡುತ್ತಿದ್ದ ಶ್ರಮದಿಂದಾಗಿ ಅವಳ ಆರೋಗ್ಯ ಕೆಟ್ಟಿತು. ಹಾಗಾಗಿ ಸ್ನಾತಕೋತ್ತರ ವಿದ್ಯಾಭ್ಯಾಸದ ಆಸೆ ಕೈಬಿಡಬೇಕಾಯಿತು. ತನ್ನ ತಾಯಿಯ ಮೇಲೆ ಅತಿಶಯ ಪ್ರೀತಿ-ಗೌರವವಿತ್ತು ಮನೋರಮೆಗೆ. ಹಾಗಾಗಿಯೇ ತನ್ನ ಮಾತೆಯ ಸಹಾಯಕ್ಕಾಗಿ, ತನ್ನ ಆರೋಗ್ಯದ ಕಡೆಗೆ ಗಮನಿಸದೆ ದುಡಿಯತೊಡಗಿದಳು. ಶಾರದಾ ಸದನದ ಆಡಳಿತ, ಪತ್ರವ್ಯವಹಾರ, ಅಧ್ಯಾಪನ ಮುಂತಾದ ಕೆಲಸಗಳು ಮನೋರಮೆಯದಾಗಿದ್ದವು. ಶಾರದಾ ಸದನದಲ್ಲಿ ಬಾಲಿಕೆಯರಿಗೆಲ್ಲರಿಗೂ ಪ್ರೀತಿಯ "ತಾಯೀ" ಆಗಿದ್ದವಳು ಮನೋರಮೆ. ಮರಾಠಿಯಲ್ಲಿ ಮಕ್ಕಳು 'ತಾಯಿ' ಅಂದರೆ ಅಕ್ಕ ಎಂದರ್ಥ. ಹೊರಗೆ ಹೊರಟರೆ ಸಾಕು ಮಕ್ಕಳು ಮನೋರಮೆಯ ಕೈಹಿಡಿದುಕೊಂಡೋ ಹಿಂದೆ ಮುಂದೆಯೋ ಇದ್ದೋ ಹೊರಡುತ್ತಿದ್ದರು. ತಾನೇ ಸ್ಥಾಪಿಸಿದ ಶಾರದಾ ಸದನದ ಜತೆಗಿದ್ದ ಖೇಡ್‌ಗಾಂವ್‌ದಲ್ಲಿನ ಅಂಧರ ಶಾಲೆಯನ್ನು ತಾನೇ ನೋಡಿಕೊಳ್ಳುತ್ತಿದ್ದಳು. ಅಮೇರಿಕದಲ್ಲಿ ಬ್ರೈಲ್ ತರಪದ ರಬ್ಬರಿನ ಉಬ್ಬು ಅಕ್ಷರಗಳನ್ನು ಸ್ಪರ್ಶದಿಂದ ಗುರುತಿಸುವುದನ್ನು ಮನೋರಮೆ ಅಭ್ಯಾಸ ಮಾಡಿದ್ದಳು. ಭಾರತದಲ್ಲಿ ಅಂಧರ ಶಾಲೆ ಮಾಡುವ ಉದ್ದೇಶ ಮನೋರಮೆಯ ಗುರಿಯಾಗಿತ್ತು. ಇದು ಭಾರತದಲ್ಲಿ ಪ್ರಥಮವಾಗಿತ್ತು. ಮನೋರಮೆಯ ಕೆಲಸಗಳಿಗಾಗಿ ಅಮೇರಿಕದ ರಮಾಬಾಯಿ ಅಸೋಸಿಯೇಶನ್ ಮುನ್ನೂರು ಡಾಲರ್ ಸಂಬಳ ಕೊಡುತ್ತಿತ್ತು. ಆದರೆ ಮನೋರಮಾ ಅದನ್ನು ನಿರಾಕರಿಸಿ, ದೇವರು ನಮ್ಮ ಆಶೆ-ಆಕಾಂಕ್ಷೆಗಳನ್ನು ಪೂರೈಸುತ್ತಿರಬೇಕಾದರೆ ವೇತನ ಯಾಕೆ? ಅನ್ನುತ್ತಿದ್ದಳು.

೧೯೦೩ರಲ್ಲಿ ಮನೋರಮಾ ಆಸ್ಟ್ರೇಲಿಯಾ, ನ್ಯೂಜಿಲೆಂಡ್ ಪ್ರವಾಸಕ್ಕೆ ಹೋದಾಗ, ಅನೇಕ ಪ್ರಾರ್ಥನಾ ಮಂಡಲಗಳನ್ನು ಸ್ಥಾಪಿಸಿ, ಉಪನ್ಯಾಸ ಕೊಟ್ಟಳು. 'ಬೈಬಲ್'ನ ಮೇಲೆ ತನ್ನ ೨೨ ವರ್ಷಕ್ಕೆ ಉತ್ತಮ ವ್ಯಾಖ್ಯಾನ ಕೊಡಬಲ್ಲವಳಾಗಿದ್ದಳು. "ನಾನು ನಿಮ್ಮ ಕಲ್ಲಿನ ಹೃದಯ ತೆಗೆದು ಮೃದು ಹೃದಯವನ್ನು ಕೊಡುತ್ತೇನೆ. ನಿಮ್ಮಲ್ಲಿ ಹೊಸ ಆತ್ಮ ತುಂಬುತ್ತೇನೆ" ಅನ್ನುವ ಅವಳ ವ್ಯಾಖ್ಯಾನಗಳು ಪತ್ರಿಕೆಗಳಲ್ಲಿ ರಾರಾಜಿಸಿದವು. ಆಸ್ಟ್ರೇಲಿಯಾದಲ್ಲಿದ್ದಾಗ "ವಿಧವೆಯರ ಮಿತ್ರಳು" (A friend of widows) ಎಂಬ ಇನ್ನೂರು ಪುಟಗಳ ಪುಸ್ತಕ

ಪ್ರಕಟವಾಯಿತು. ಪಂ. ರಮಾಬಾಯಿ ಅವರ ಸಾಧನೆಗಳನ್ನು ಕಟ್ಟಿಕೊಟ್ಟಿರುವ ಹೊತ್ತಗೆ ಅದು. ೧೪ ವರ್ಷಗಳ ಮೊದಲು ರಮಾಬಾಯಿಯ ಪುಸ್ತಕ ಬಿಡುಗಡೆಯಾಗಿತ್ತು. ಮನೋರಮೆ ಈ ಪುಸ್ತಕದ ಮುಂದಿನ ಭಾಗವಾದ "ಉತ್ತರಾರ್ಧ" (Next half) ಎಂಬ ಹೆಸರಿನ ಪುಸ್ತಕ ಬರೆದು ಪ್ರಕಟಿಸಿದಳು. ಒಬ್ಬ ವಿದ್ಯಾರ್ಥಿನಿಯಿಂದ ಆರಂಭವಾದ ಶಾರದಾ ಸದನವು 'ಖೇಡ್‌ಗಾಂವ್'ನ ಮುಕ್ತಿ ಸದನದವರೆಗೆ ಅಭಿವೃದ್ಧಿಗೊಂಡ ಪರಿಯನ್ನು ಈ ಪುಸ್ತಕದಲ್ಲಿ ದಾಖಲಿಸಿದಳು. ಅನೇಕ ವಿಧವೆಯರ ದೃಷ್ಟಾಂತಗಳ ಜತೆಗೆ ಈಶ್ವರಭಕ್ತಿ, ಆತ್ಮವಿಶ್ವಾಸ ಇವುಗಳನ್ನು ಈ "ಉತ್ತರಾರ್ಧ"ದಲ್ಲಿ ವರ್ಣಿಸಲಾಗಿತ್ತು.

ವಿದೇಶ ಸಂಚಾರದ ಬಳಿಕ ಮನೋರಮಾ ಇನ್ನೊಂದು ದಿಟ್ಟ ಹೆಜ್ಜೆ ಇಟ್ಟಳು. ಗುಲ್ಬರ್ಗದಲ್ಲಿ ಬಾಲಿಕಾ ಪಾಠಶಾಲೆ ತೆರೆದಳು. ಈ ಹಿಂದೆ ಅಲ್ಲಿ ಶಾಂತಿಸದನ ಎಂಬ ಶಾಲೆಯನ್ನು ಆರಂಭಿಸಬೇಕೆಂಬುದು ರಮಾಬಾಯಿ ಇಚ್ಛೆಯಾಗಿದ್ದರೂ ಬೇರೆ ಬೇರೆ ತೆರನಾದ- ವಿರೋಧ, ಅನನುಕೂಲತೆಗಳಾದವು. ಮನೋರಮಾ ಅಚಲವಾದ ಮನೋಧೈರ್ಯ ದಿಂದ ಗುಲ್ಬರ್ಗಾದಲ್ಲಿ ೨೯-೯-೧೯೧೩ರಲ್ಲಿ ಶಾಂತಿ ಸದನ ಪಾಠಶಾಲೆ ತೆರೆದಳು. ಆರಂಭದಲ್ಲೇ ೭೦ ವಿದ್ಯಾರ್ಥಿನಿಯರು ಇರುವಂತಾಯಿತು.

ಮನೋರಮೆ ಹೆಚ್ಚು ಹೆಚ್ಚು ಕೆಲಸಗಳಲ್ಲಿ ವ್ಯಸ್ತಳಾದಂತೆ ಜವಾಬ್ದಾರಿಗಳೂ ಅಧಿಕ ವಾದವು. 'ಮುಕ್ತಿ ಸದನ', 'ಶಾರದಾ ಸದನ' ಹಾಗೂ ಈಗ 'ಶಾಂತಿ ಸದನ'ದ ಹೊಣೆಗಾರಿಕೆ ಮನೋರಮಾ ಮೇಲೆ ಬಿತ್ತು. ದೇಶದಲ್ಲಿ ಎಲ್ಲೆಲ್ಲಿ ಅನಾಥ ಸ್ತ್ರೀಯರು ಸಂಕಷ್ಟದಲ್ಲಿರುವರೋ ಅಲ್ಲಿಗೆಲ್ಲ ಮನೋರಮೆ ಧಾವಿಸುತ್ತಿದ್ದಳು. ಅದೆಷ್ಟೋ ದೂರವನ್ನು ಎತ್ತಿನ ಗಾಡಿಯಲ್ಲಿ ಕ್ರಮಿಸುತ್ತಿದ್ದಳು. ರಾತ್ರಿ ಕೆಲವು ಬಾರಿ ದೇವಾಲಯದ ಚಾವಡಿ, ಧರ್ಮಶಾಲೆಯ ಜಗಲಿಯೇ ಇವಳಿಗೆ ಆಶ್ರಯ. ಆದರೆ ಅದಾವ ಕಷ್ಟಗಳಿಗೂ ತಾಯಿಯಂತೆ ಮಗಳೂ ಹಿಂಜರಿಯುತ್ತಿದ್ದಿಲ್ಲ. "ದೇವರ ಕಷ್ಟದ ಎದುರು ನಾವು ಪಡುವ ಕಷ್ಟ ಎಷ್ಟರದು?" ಎನ್ನುತ್ತಿದ್ದಳು.

"ದುರ್ಗುಣಗಳ ಸುಧಾರಣೆ ಪ್ರಾರ್ಥನೆ, ಉಪವಾಸಗಳಿಂದ ಸಾಧ್ಯ" ಎನ್ನುವ ಬೈಬಲ್‌ನ ನುಡಿ ಮೇಲೆ ಮನೋರಮಾಗೆ ಅಚಲ ನಂಬಿಕೆ. ಖೇಡ್‌ಗಾಂವ್‌ನ ಮುಕ್ತಿ ಸದನದಲ್ಲಿ, ಕ್ಷಾಮಕಾಲದಲ್ಲಿ ಆಶ್ರಯ ಪಡೆದ ಸಾವಿರಾರು ಮಹಿಳೆಯರು ಅನವಶ್ಯಕ ಚಾಳಿಗಳಿಂದ ಕೂಡಿದ್ದರು. ಇವರನ್ನು ಸುಧಾರಿಸಲು ಮನೋರಮಾ ಪ್ರಾರ್ಥನೆ, ಉಪವಾಸ ಆರಂಭಿಸಿದರು. ಇದರ ಪರಿಣಾಮ ಗಾಢವಾದ ರೀತಿಯಲ್ಲಿ ಮಹಿಳೆಯರ ಮೇಲೆ ಆಯಿತು. ಆದರೆ ಮನೋರಮಾಳ ಆರೋಗ್ಯ ಹದಗೆಟ್ಟಿತು. ಶ್ವಾಸಕೋಶದ ತೊಂದರೆ ಗಳುಂಟಾಗಿ ಹೃದಯ ದುರ್ಬಲಗೊಂಡಿತ್ತು. ಅವರು ಚಿಕಿತ್ಸೆಗಾಗಿ ಖೇಡ್‌ಗಾಂವ್‌ನಿಂದ ಮೀರಜಿಗೆ ಪ್ರಯಾಣ ಮಾಡಿದರೂ, ಅಲ್ಲಿ ಫಲಕಾರಿಯಾಗದೆ ೧೯೨೧ನೇ ಜುಲೈ ೨೪ರಂದು ತನ್ನ ೪೦ನೇ ವಯಸ್ಸಿನಲ್ಲೇ ಇಹಲೋಕಯಾತ್ರೆ ಮುಗಿಸಿದಳು. ರಮಾಬಾಯಿಯ

ಜೀವನದ ಅಮೂಲ್ಯ ರತ್ನವೊಂದು ಗತಿಸಿದ ತನ್ನ ಬಂಧುಗಳ ಹಾರದಲ್ಲಿ ಸೇರ್ಪಡೆಗೊಂಡಿತು. ಮನೋರಮಾ ತನ್ನ ಸಾರ್ಥಕ ಬದುಕನ್ನು ಬೆಳಗಿ; ತಾಯಿಗೆ ಆಧಾರವಾಗಿ ನೆನಪನ್ನು ಕಾಡುವಂತಾದರು.

## ಜೀವನ ಸಾಕ್ಷಾತ್ಕಾರ

ಪಂ. ರಮಾಬಾಯಿಯ ಜೀವನ ಅಮೇರಿಕಾ ಪ್ರವಾಸದಿಂದ ಬಂದ ಮೇಲೆ ಹೇಗಾಯಿತು ಎಂಬುದನ್ನು ಆಗಲೇ ತಿಳಿಸಿದೆ. ೧೯೦೨ರಲ್ಲಿ ಗುಜರಾತಿನಲ್ಲಿ ಬಂದ ಕ್ಷಾಮ ಅನೇಕ ದುರ್ದೈವೀ ಜನರ ಆರ್ತನಾದವಾಯಿತು. ಇಲ್ಲೂ ರಮಾಬಾಯಿ ಅವರಿಗೆ ಧ್ವನಿಯಾದರು – ಮಾತೆಯಾದರು. ೧೩೫೦ ಹೆಂಗಸರು, ಮಕ್ಕಳು 'ಮುಕ್ತಿ ಸದನ'ದಲ್ಲಿ ಆಶ್ರಯ ಪಡೆದರು.

ಪಂಡಿತಾ ರಮಾಬಾಯಿ ಖೇಡಗಾಂವ್‌ನ ಶಕ್ತಿಯಾದರು. ಇಡೀ ಊರನ್ನೇ ಬದಲಾಯಿಸಿದರು. ಅಲ್ಲಿ ಸೇರುವ ಸಂತೆಗೆ ಊರವರು ಧವಸ ಧಾನ್ಯ ತರುತ್ತಿದ್ದರು. ಮಾರಾಟವಾಗಿ ಉಳಿದ ಧಾನ್ಯವನ್ನು ಸದನಗಳ ಉಪಯೋಗಕ್ಕೆ ಪಡೆಯಲಾಗುತ್ತಿತ್ತು. ನೀರನ್ನು ಹೊತ್ತು ತರಬೇಕಾದ ಸ್ಥಿತಿ ಇತ್ತು. ರಮಾಬಾಯಿ ಸುಮಾರು ೧೦-೧೨ ಬಾವಿಗಳನ್ನು ತೋಡಿಸಿ ನೀರಿನ ಅಭಾವ ನೀಗಿಸಿದರು. ದಾನರೂಪವಾಗಿ ಬಂದ ಸಲಕರಣೆಗಳಿಂದ ಆಶ್ರಮದ ಎಲ್ಲ ಕಡೆಗಳಲ್ಲೂ ನೀರು ಬರುವಂತಾಯಿತು. ೪೦ ಎಕರೆ ಸ್ಥಳವು ಕೃಷಿಯೋಗ್ಯವಾಗಿ ಹೊಲಗದ್ದೆ ತೋಟಗಳಿಂದ ಕಂಗೊಳಿಸಿತು. ರೋಗಪೀಡಿತರಿಗಾಗಿ ಚಿಕಿತ್ಸಾಕೇಂದ್ರವೊಂದನ್ನು ಖೇಡ್‌ಗಾಂವ್‌ನಲ್ಲೇ ರಮಾಬಾಯಿ ತೆರೆದರು.

'ಮುಕ್ತಿ ಸದನ'ದ ಜತೆಗೆ 'ಕೃಪಾ ಸದನ'ವೂ ಸೇರಿತು. ಸಮಾಜದಿಂದ ಬಹಿಷ್ಕೃತ ಮಹಿಳೆಯರಿಗೆ ಆಶ್ರಯವಾಗುವುದೇ ಇದರ ಧ್ಯೇಯ. ಸಂದರ್ಭವಶಾತ್ ಕೆಟ್ಟದಾರಿ ತುಳಿದು ಸಮಾಜದಲ್ಲಿ ತಿರಸ್ಕೃತರಾದವರನ್ನು ಸಂಸ್ಕಾರಕ್ಕೆ ಅಳವಡಿಸಿ, ನವ ಜೀವನವನ್ನು ಮಾಡುವಂತೆ ಮಾಡುವುದೇ 'ಕೃಪಾ ಸದನ'ದ ಗುರಿಯಾಗಿತ್ತು. ಪತಿತ ಸ್ತ್ರೀಯರನ್ನು, ಸಮಾಜದಿಂದ ಕಠೋರವಾಗಿ ತಿರಸ್ಕರಿಸಲ್ಪಟ್ಟವರನ್ನು ರಮಾಬಾಯಿ ತೆಕ್ಕೆಗೆ ಹಾಕಿಕೊಂಡು ಅವರನ್ನು ಪ್ರೀತಿಯಿಂದ ದಾರಿಗೆ ತಂದರು.

ಅಂಗಹೀನರು, ಮುದುಕರು, ಅಶಕ್ತರಿಗಾಗಿ 'ಪ್ರೀತಿ ಸದನ' ಆರಂಭಿಸಿದರು ರಮಾಬಾಯಿ. ಇಂತಹವರು ಪರಾವಲಂಬಿ ಜೀವನದ ಕಷ್ಟಗಳನ್ನು ಮರೆಯುವಂತೆ ಅವರಿಗೆ ಮನೋರಂಜಕವಾದ ಕಥೆ-ಇತಿಹಾಸ ಹೇಳಿಕೊಡುತ್ತಿದ್ದರು. ಇವರನ್ನು ದುಃಖದಿಂದ ಸಮಾಜಮುಖಿತ್ವದ ಕಡೆಗೆ ತರುತ್ತಿದ್ದರು.

ಕುರುಡರಿಗೆ ಅಕ್ಷರಾಭ್ಯಾಸ, ವೃತ್ತಿ ಶಿಕ್ಷಣವನ್ನೂ ಕೊಡುವ ಅಂಧರ ಶಾಲೆಯೊಂದು ಭಾರತದಲ್ಲೇ ಪ್ರಥಮ ಬಾರಿಗೆ ಖೇಡ್‌ಗಾಂವ್‌ದಲ್ಲಿ ಆರಂಭವಾಯಿತು. ವಿದ್ಯಾಭ್ಯಾಸದ ಜತೆಗೆ-ಬಟ್ಟೆ ಹೊಲಿಯುವುದು, ಬೆತ್ತದ ಕುರ್ಚಿ ಹೆಣೆಯುವುದು, ಬಾಳೆನಾರಿನ ಚೀಲ ತಯಾರಿಕೆ, ನಾರಿನ ಹಗ್ಗ ತಯಾರಿಸುವುದು ಇತ್ಯಾದಿ ವೃತ್ತಿಗಳನ್ನು ಕುರುಡರು ಮಾಡುತ್ತಿದ್ದರು.

ಅನಾಥ ಹುಡುಗರಿಗಾಗಿ 'ಸದಾನಂದ ಭವನ' ಆರಂಭವಾಯಿತು. ಎಲ್ಲ ಮಟ್ಟದ ಜನರಿಗೆ ವೃತ್ತಿ ಶಿಕ್ಷಣ ಕೊಟ್ಟು, ಅವರು ಸುಖ ಸಮಾಧಾನಗಳಿಂದ ಜೀವಿಸುವಂತೆ ಮಾಡಿದರು ರಮಾಬಾಯಿ. ಕಲ್ಲು ಕಟ್ಟುವುದು, ಗೋಡೆ ನಿರ್ಮಾಣ, ನೇಯ್ಗೆ, ಬಡಗಿ ಎಲ್ಲ ನಿರ್ವಹಣೆ ಮಹಿಳೆಯರದೇ ಆಗಿತ್ತು. ಬಾವಿ ತೋಡುವುದರಿಂದ ಹಿಡಿದು, ಕೃಷಿ, ವ್ಯವಸಾಯ, ಉಳುವುದು ಮುಂತಾದುವುಗಳೇ ಅಲ್ಲದೆ ಪ್ರಿಂಟಿಂಗ್‌ಗೆ, ಬ್ಯಾಂಡಿಂಗ್‌ಗೆ ಹುಡುಗಿಯರು ಸೇರುತ್ತಿದ್ದರು. ಉತ್ತಮ ರೀತಿಯ ಸಹಬಾಳ್ವೆ ನಡೆಸುವಂತೆ ಮಾಡಿದವರು ರಮಾಬಾಯಿ.

ಇವರ ಈ ಕೆಲಸಗಳನ್ನು ದೇಶವಿದೇಶಗಳ ಗಣ್ಯರಿಂದ ಹಿಡಿದು, ಸಾಮಾನ್ಯ ಜನರವರೆಗಿನ ಎಲ್ಲರೂ ಗಮನಿಸುತ್ತಿದ್ದರು. ಅತಿಥಿಗಳಿಂದ ತುಂಬಿರುತ್ತಿತ್ತು ಖೇಡ್‌ಗಾಂವ್. ಅದಕ್ಕಾಗಿಯೇ ಒಂದು ವಿಶೇಷ ವ್ಯವಸ್ಥೆ ಮಾಡಲಾಗಿತ್ತು. "ಯಾರಾದರೂ ಹಸಿವಿನಿಂದ ಬಂದರೆ ಊಟ ಕೊಡು, ಬಾಯಾರಿಕೆಯಿಂದ ಬಂದರೆ ಕುಡಿಯಲು ಕೊಡು, ಬಟ್ಟೆ ಇಲ್ಲದವರಿಗೆ ಬಟ್ಟೆ ಕೊಡು, ನಿರ್ಗತಿಕರಿಗೆ ಆಸರೆ ಕೊಡು" ಎಂಬ ಬೈಬಲ್ಲಿನ ಉಪದೇಶ ಗಳನ್ನು ರಮಾಬಾಯಿ ಆಚರಣೆಗೆ ತಂದಿದ್ದರು. ಪಂಡಿತಾ ರಮಾಬಾಯಿಯವರ ಸೇವಾ ಕಾರ್ಯಗಳನ್ನು ಗಮನಿಸಿ, ೧೯೧೯ರಲ್ಲಿ ಭಾರತ ಸರಕಾರವು ಅವರಿಗೆ "ಕೈಸರ್-ಇ- ಹಿಂದ್" ಎಂಬ ಬಿರುದು ಪ್ರದಾನಿಸಿತು.

ಇಷ್ಟರಲ್ಲೇ ರಮಾಬಾಯಿಯವರಿಂದ ಹಿಬ್ರೂ ಭಾಷೆಯಲ್ಲಿದ್ದ ಬೈಬಲ್ ಮರಾಠಿಗೆ ಭಾಷಾಂತರಗೊಳ್ಳುತ್ತಿತ್ತು. ಮಗಳ ಅಕಾಲಿಕ ಮರಣವೂ ಇವರನ್ನು ಜರ್ಜರಿತಗೊಳಿಸಿತು. ಜತೆಗೆ ಇಳಿವಯಸ್ಸು ಬೇರೆ. ಆರೋಗ್ಯದಲ್ಲಿ ಏರುಪೇರಾಯಿತು. ಮಗಳ ಮರಣ ತಿಳಿದ ಅನೇಕರು ರಮಾಬಾಯಿಯನ್ನು ಸಾಂತ್ವನಗೊಳಿಸಲಿಕ್ಕಾಗಿ ಭೇಟಿಯಾದರು. ಕೆಲವರು ಪತ್ರ ಬರೆದರು. ಆದರೆ ಸಮಚಿತ್ತದ ಉತ್ತರ ರಮಾಬಾಯಿಯವರದ್ದಾಗಿತ್ತು. "ಎಲ್ಲವೂ ದೇವರಿಚ್ಛೆ ಮನೋರಮೆಗೆ ದೇವರ ಕರೆ ಬಂತು. ದೇವರ ಸನ್ನಿಧಿಗೆ ತೆರಳಿದ್ದಾಳೆ" ಎನ್ನುತ್ತಿದ್ದರು.

ಮನೋರಮೆಗಿಂತ ಮೊದಲೇ, ಎರಡು ವರ್ಷಗಳಿಂದ ಅಸ್ಥಿಜ್ವರ ರಮಾಬಾಯಿ ಯನ್ನು ಕಾಡುತ್ತಿತ್ತು. ಆಹಾರ ಸೇವನೆಯೂ ನಿಯಮಿತವಾಗಿರಲಿಲ್ಲ, ತನ್ನ ಕೆಲಸ ಪೂರ್ತಿಯಾಗುವವರೆಗೆ ಜೀವಂತ ಇದ್ದರೆ ಸಾಕು ಎಂದೇ ಹೇಳುತ್ತಿದ್ದ ರಮಾಬಾಯಿ ಇದುವರೆಗೆ ಯಾರೂ ಮಾಡಿರದ ಮರಾಠಿ ಬೈಬಲ್‌ನ ರಚನೆಯಲ್ಲಿ ವ್ಯಸ್ತರಾಗಿದ್ದರು. ಅದು

ಮುಗಿಯುತ್ತಿದ್ದಂತೆ ಜ್ವರದ ಬಾಧೆ ವಿಪರೀತವಾಯಿತು. ಔಷಧಿ ಬದಲಿಗೆ ದೇವರ ಪ್ರಾರ್ಥನೆಯೇ ಬಲವಾಯಿತು.

ಒಂದು ದಿನ ಎಲ್ಲ ಹುಡುಗಿಯರನ್ನು ಕರೆದು, "ಮನೋರಮೆಯಂತೆ ನಾನೂ ದೇವರ ಸಾನ್ನಿಧ್ಯಕ್ಕೆ ತೆರಳುವ ದಿನ ಬಂದಿದೆ. ಆಶ್ರಮದ ಎಲ್ಲ ಜವಾಬ್ದಾರಿಯೂ ಸುಂದರೀ ಬಾಯಿಗೆ ಗೊತ್ತಿದೆ. ಅವಳು ನಿಮ್ಮನ್ನೆಂದೂ ಕೈ ಬಿಡುವುದಿಲ್ಲ. ನೀವು ಅವಳಿಗೆ ವಿಧೇಯರಾಗಿ ಸಹಾಯ ಮಾಡಿರಿ. ಅವಳು ನಿಮ್ಮ ಯೋಗಕ್ಷೇಮ ನೋಡಿಕೊಳ್ಳುತ್ತಾಳೆ" ಅಂದಾಗ ಎಲ್ಲ ಮಕ್ಕಳೂ "ತಾಯೀ, ನಾವೆಲ್ಲ ಅನಾಥರಾಗುತ್ತೇವೆ" ಎಂದು ಅಳಹತ್ತಿದರು. ರಮಾಬಾಯಿ ಸಮಾಧಾನ ಪಡಿಸಿದರು.

೧೯೨೨ನೇ ಏಪ್ರಿಲ್ ೫ರಂದು ಬೈಬಲ್‌ನ ಹಸ್ತಲಿಖಿತ ಪ್ರತಿಯನ್ನು ಛಾಪಖಾನೆಗೆ ಕಳಿಸಿ ಸಂಜೆ ತನ್ನ ರೂಮನ್ನು ತೊಳೆಯುವಂತೆ ಹುಡುಗಿಯರಿಗೆ ಹೇಳಿದರು ರಮಾಬಾಯಿ. ತನ್ನ ಸ್ನಾನಾದಿ ಪೂರೈಸಿ ದೇವರ ಧ್ಯಾನ ಮಾಡುತ್ತ ಮಲಗಿದರು. ಮಲಗಿದವರು ಏಳಲಿಲ್ಲ. ಅವರನ್ನು ಎಬ್ಬಿಸ ಬಂದ ಆಶ್ರಮವಾಸಿಗಳು ಏಳದಿರುವುದನ್ನು ಕಂಡು ಹೌಹಾರಿದರು. ರಮಾಬಾಯಿ ತಿರುಗಿಬಂದ ಲೋಕಕ್ಕೆ ಹೋಗಿಬಿಟ್ಟಿದ್ದರು. ಆಕೆಯ ಸಾವಿನ ಸುದ್ದಿ ಎಲ್ಲೆಡೆ ಹಬ್ಬಿತು. ಅಂತಿಮ ದರ್ಶನಕ್ಕೆ ಜನರು ತಂಡೋಪತಂಡವಾಗಿ ಬಂದು ಅಶ್ರುತರ್ಪಣಗೈದರು. ಖೇಡಗಾಂವ್‌ನ ರಮಾಬಾಯಿ ಆಶ್ರಮ ಅನಾಥವಾಯಿತು.

ಎಲ್ಲೆಲ್ಲೂ ಶೋಕಸೂಚಕ ಸಭೆಗಳು ಜರುಗಿದವು. ಎಲ್ಲ ಪತ್ರಿಕೆಗಳು ಆಕೆಯನ್ನು ಸಮಾಜಸೇವೆಗಾಗಿ ಕೊಂಡಾಡಿದವು. ಭಾರತೀಯ ಸ್ತ್ರೀಯರ ಸುಧಾರಣೆಗಾಗಿ ದುಡಿದ ಅಪೂರ್ವ ಮಹಿಳೆ ಎಂದು ಬಣ್ಣಿಸಲಾಯಿತು. ಮುಂಬೈ ಶೋಕಸಭೆಯಲ್ಲಿ ಸರೋಜಿನಿ ನಾಯ್ಡು ಇವರನ್ನು "ಹಿಂದೂ ಸಂತ ಪರಂಪರೆಯ ಕ್ರೈಸ್ತ ಮಹಿಳೆ" ಎಂದರು.

ಇಂದು ಆಕೆ ನಮ್ಮ-ನಿಮ್ಮೊಡನೆ ಇಲ್ಲ ನಿಜ. ಆದರೆ ಆಕೆ ಆತ್ಮಶಕ್ತಿಯಾದ, ಸ್ಥಾಪಿಸಿ ಪೋಷಿಸಿದ ಮುಕ್ತಿ ಮಿಶನ್ ಮೂಲಕ ಅದರ ಚಟುವಟಿಕೆಗಳ ಮೂಲಕ ಅದೃಶ್ಯವಾಗಿಯೂ ಅಸ್ತಿತ್ವದಲ್ಲಿದ್ದಾರೆ ಎಂದರೆ ತಪ್ಪಲ್ಲ.

ಪಂಡಿತಾ ರಮಾಬಾಯಿ ಸರಸ್ವತಿ ಸ್ತ್ರೀ ಸಮುದಾಯಕ್ಕೆ ಶಿರೋರತ್ನ. ನಿಸ್ವಾರ್ಥ ಮನದ ಅಚಲ ನಿರ್ಧಾರದ ಸೇವೆಯಿಂದ ಜೀವನವನ್ನು ಸಾರ್ಥಕತೆಯಲ್ಲಿ ಸಾಗಿಸಿದ ಧೀರೆ. ಎಲ್ಲರಿಗೂ ಮಾರ್ಗದರ್ಶಕರಾದರು. ಪಂಡಿತಾರವರ ಸಮಕಾಲೀನ-ಸಹೋದ್ಯೋಗಿ ಭಾರತರತ್ನ ಧೋಂಡೋ ಕೇಶವ ಕರ್ವೆಯವರು ರಮಾಬಾಯಿಯವರಿಂದಲೇ ಸ್ಫೂರ್ತಿ ಪಡೆದು ಸ್ಥಾಪಿಸಿದ ಸ್ತ್ರೀ ಶಿಕ್ಷಣ ಸಂಸ್ಥೆ ಪುಣೆಯ "ಹಿಂಗಣೆ"ಯಲ್ಲಿ ಸರಕಾರ-ಸಾರ್ವಜನಿಕರ ವೆಚ್ಚದಿಂದ ಈಗಲೂ ನಡೆಯುತ್ತಿದೆ.

ರಮಾಬಾಯಿ ಬಗ್ಗೆ ಸಾಕಷ್ಟು ಚರ್ಚೆಗಳಾಗಿವೆ. ಅವರ ಬರಹಗಳು ಪಠ್ಯಪುಸ್ತಕಗಳಾಗಿವೆ. ಆದರೆ ಕರ್ನಾಟಕದಲ್ಲಿ ಅವರಿಗೆ ವಿಶೇಷ ಮಹತ್ವ ನೀಡಿದಂತೆ ಕಾಣುವುದಿಲ್ಲ. ದೀಪದ ಬುಡದಲ್ಲಿ ಕತ್ತಲೆಯಿರುವಂತೆ ನಮಗೆ ನಮ್ಮೊಳಗಿನ ಚೇತನದ ಅರಿವೇ ಇರುವುದಿಲ್ಲ. ಸ್ತ್ರೀ ಸಶಸ್ತ್ರೀಕರಣದ ಕನಸು ಕಂಡು, ಈ ಭೂಮಿ ನನ್ನ ಮನೆ, ಮನುಕುಲವೇ ನನ್ನ ಕುಟುಂಬದಂತೆ ಎಂದು ಬದುಕಿದ ರಮಾಬಾಯಿ ಅವರ ಸಾಧನೆಗಳನ್ನು ತೌರವರು ಅರಿಯಲೇ ಇಲ್ಲ, ಗೌರವಿಸಲೇ ಇಲ್ಲ. ಸಮಗ್ರ ಭಾರತ ದೇಶವನ್ನೇ ತನ್ನ ಕಾರ್ಯಕ್ಷೇತ್ರವನ್ನಾಗಿ ಮಾಡಿದ್ದರಿಂದ ಬಂಗಾಳಿಗಳು, ಮಹಾರಾಷ್ಟ್ರೀಯರು ರಮಾಬಾಯಿಯವರನ್ನು ತಮ್ಮವಳೆಂದು ಹೆಮ್ಮೆ ಪಡುತ್ತಾರೆ; ಆದರಾಂಜಲಿ ಅರ್ಪಿಸುತ್ತಾರೆ. ರಮಾಬಾಯಿ ತನ್ನ ಕಾಲಧರ್ಮವನ್ನು ಮೀರಿ ಮಾನವೀಯ ವಿಶಾಲ ಪಾತಳಿಯ ಮೇಲೆ ನಿಂತು ಮಹಿಳೆಯರ ಬದುಕಿನ ಕಷ್ಟ-ಕಾರ್ಪಣ್ಯದ ಬಗ್ಗೆ ಚಿಂತಿಸಿದವರು; ದುಡಿದವರು. ಅಂಥ ರಮಾಬಾಯಿಯವರನ್ನು ಸರಿಗಟ್ಟುವ ಇನ್ನೊಂದು ವ್ಯಕ್ತಿತ್ವ ನೋಡಸಿಗುವುದಿಲ್ಲ. ಆಕೆ ಮತಾಂತರಗೊಂಡರು ಎನ್ನುವ ಬದಲು ಆಕೆಯ ಚಿಂತನೆ, ಬದುಕು, ಬರಹ ಈ ಸಮಾಜದಲ್ಲಿ ತಂದ ಬದಲಾವಣೆ, ನೊಂದ ಜೀವಗಳಿಗೆ ನೀಡಿದ ಸಾಂತ್ವನದ ಬಗ್ಗೆ ಯೋಚಿಸಿದರೆ ಸಾಕು. ಅದೆಷ್ಟೊಂದು ಮಹಾನ್ ಕಾರ್ಯ! ಸಮಾಜದ ಪರಿಮಿತಿಯ ರೇಖೆಯೊಳಗೇ ಇದ್ದಿದ್ದರೆ ಅವರೊಳಗಿನ ಅದಮ್ಯ ಚೇತನ ಬೆಳಗಲು ಸಾಧ್ಯವಿತ್ತೇ? ಅವರ ಸಮಕಾಲಕ್ಕೆ ಮಾನಸಿಕವಾಗಿ ತೆರಳಿ, ಆಗಿನ ಸಮಾಜಸ್ಥಿತಿ, ಆಚಾರ ವಿಚಾರ, ಬಿಕ್ಕಟ್ಟು ಇವುಗಳನ್ನೆಲ್ಲ ಅಭ್ಯಸಿಸಿ ಬರೆಯಬೇಕಾದದ್ದು ಒಂದು ಸವಾಲೇ ಸೈ. ಮಹಿಳೆ ಎಲ್ಲ ಹಂತಗಳಲ್ಲೂ ಸ್ವತಂತ್ರಳಾಗಿರಬೇಕೆಂಬ ಅವರ ಆಶಯ ಈಗ ನನಸಾದಂತಿದೆ. ಇಂದಿನ ಮಹಿಳೆ ಸಮಾಜದ ಕಷ್ಟದ, ಅವಮಾನದ ಗಂಡಾಂತರಗಳನ್ನು ಗೆದ್ದು ಬಂದಾಗಿದೆ. ಒಟ್ಟಿನಲ್ಲಿ ಭಾರತೀಯ ಸ್ತ್ರೀಯರಿಗೆ ಪಂ.ರಮಾಬಾಯಿ ಸರಸ್ವತಿ ಎಂದೆಂದಿಗೂ ಸ್ಫೂರ್ತಿಯೇ ಆಗಿದ್ದಾರೆ.



# ನಾಡಿಗೆ ನಮಸ್ಕಾರ

## ಮೊದಲ ಕಂತಿನ ಹತ್ತು ಹೊತ್ತಗೆಗಳು

ಕುಸುಮ ೧. ಪದ್ಮಭೂಷಣ ಡಾ. ವೀರೇಂದ್ರ ಹೆಗ್ಗಡೆಯವರು
ಲೇಖಕರು : ಡಾ. ಬಿ.ಪಿ. ಸಂಪತ್‌ಕುಮಾರ್, ಉಜಿರೆ

ಕುಸುಮ ೨. ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯ
ಲೇಖಕರು : ಬೆಳಗೋಡು ರಮೇಶ ಭಟ್

ಕುಸುಮ ೩. ಸಂಶೋಧಕ ಮಹೋಪಾಧ್ಯಾಯ
ಡಾ. ಉಳಿಯಾರು ಪದ್ಮನಾಭ ಉಪಾಧ್ಯಾಯ
ಲೇಖಕರು : ಎಸ್.ಆರ್. ಅರುಣಕುಮಾರ್

ಕುಸುಮ ೪. ಹಿರಿಯ ಸಾಹಿತಿ : ಜನಾರ್ದನ ಗುರ್ಕಾರ್
ಲೇಖಕರು : ಡಾ. ಬಿ. ಜನಾರ್ದನ ಭಟ್

ಕುಸುಮ ೫. ಮಹಾಕವಿ ಮಂದಾರ ಕೇಶವ ಭಟ್ಟ
ಲೇಖಕರು : ಡಾ. ನಿಕೇತನ

ಕುಸುಮ ೬. ಮೃಗಯಾ ಸಾಹಿತಿ ಕೆದಂಬಾಡಿ ಜತ್ತಪ್ಪ ರೈ
ಲೇಖಕರು : ವಿ.ಗ. ನಾಯಕ

ಕುಸುಮ ೭. ಅಭಿನವ ಧನ್ವಂತರಿ ಡಾ. ಮುಳಿಯೆ ಗೋಪಾಲಕೃಷ್ಣ ರಾಯರು
ಲೇಖಕರು : ಜನಾರ್ದನ ಗುರ್ಕಾರ್

ಕುಸುಮ ೮. ರಂಗಕರ್ಮಿ ಸದಾನಂದ ಸುವರ್ಣ
ಲೇಖಕರು : ಡಾ. ಸೀತಾಲಕ್ಷ್ಮಿ ಕರ್ಕಿಕೋಡಿ

ಕುಸುಮ ೯. ಸಸ್ಯವಿಜ್ಞಾನಿ ಡಾ. ಪಳ್ಳತ್ತಡ್ಕ ಕೇಶವ ಭಟ್ಟ
ಲೇಖಕರು : ಡಾ. ವಸಂತಕುಮಾರ ಪೆರ್ಲ

ಕುಸುಮ ೧೦. ಕರ್ನಾಟಕದ ಹಾನಿಮನ್ ಡಾ. ಕೆ. ವಸಂತಕುಮಾರ್ ರಾವ್, ಕೈಕಂಬ
ಲೇಖಕರು : ಡಾ. ವಿಶ್ವೇಶ್ವರ ವಿ.ಕೆ.

## ನಾಡಿಗೆ ನಮಸ್ಕಾರ

### ಎರಡನೇ ಕಂತಿನ ಹತ್ತು ಹೊತ್ತಗೆಗಳು

## ನಾಡಿಗೆ ನಮಸ್ಕಾರ

### ಮೂರನೇ ಕಂತಿನ ಹತ್ತು ಹೊತ್ತಗೆಗಳು

ಕುಸುಮ ೨೧. ಕಾರಂತರ ಕನ್ನಡ ದೀಕ್ಷಾ ಗುರು : ಐರೋಡಿ ಶಿವರಾಮಯ್ಯ
ಲೇಖಕರು : ಎ. ಮಾಧವ ಉಡುಪ

ಕುಸುಮ ೨೨. ಕರ್ನಾಟಕ ಏಕೀಕರಣದ ನೇತಾರ : ಕೆ.ಬಿ. ಜಿನರಾಜ ಹೆಗ್ಡೆ
ಲೇಖಕರು : ಬಿ. ಸೀತಾರಾಮ ಭಟ್

ಕುಸುಮ ೨೩. ಹಿರಿಯ ಸಹಕಾರಿ : ಮೊಳಹಳ್ಳಿ ಶಿವರಾಯ
ಲೇಖಕರು : ಡಾ. ಗಣನಾಥ ಎಕ್ಕಾರು

ಕುಸುಮ ೨೪. ಬೆಳಕಿನ ಬೀಜ : ಪಾಂಡೇಶ್ವರ ಗಣಪತಿ ರಾವ್
ಲೇಖಕರು : ಡಾ. ಬೇ.ಸೀ. ಗೋಪಾಲಕೃಷ್ಣ

ಕುಸುಮ ೨೫. ಹಿರಿಯ ಕವಿ : ಅ.ಗೌ. ಕಿನ್ನಿಗೋಳಿ
ಲೇಖಕರು : ಡಾ. ಕೆ. ಚಿನ್ನಪ್ಪ ಗೌಡ

ಕುಸುಮ ೨೬. ಸಂಗೀತ ವಿದ್ವಾಂಸ : ಚಕ್ರಕೋಡಿ ನಾರಾಯಣ ಶಾಸ್ತ್ರಿ
ಲೇಖಕರು : ಡಾ. ಎಸ್.ಆರ್. ವಿಘ್ನರಾಜ

ಕುಸುಮ ೨೭. ಸಾಂಸ್ಕೃತಿಕ ರಾಯಭಾರಿ : ಕು. ಶಿ. ಹರಿದಾಸ ಭಟ್ಟ
ಲೇಖಕರು : ಡಾ. ಎನ್.ಟಿ. ಭಟ್

ಕುಸುಮ ೨೮. ಬಹುಮುಖಿ ಸಾಹಿತಿ : ವಿಶುಕುಮಾರ್
ಲೇಖಕರು : ಅರವಿಂದ ಕರ್ಕಿಕೋಡಿ

ಕುಸುಮ ೨೯. ಜನರ ನಡುವಿನ ನ್ಯಾಯಾಧೀಶ : ಡಾ. ಶಂಕರ ಖಂಡೇರಿ
ಲೇಖಕರು : ಎಸ್.ಜಿ. ಕೃಷ್ಣ

ಕುಸುಮ ೩೦. ಸಮಾಜಮುಖಿ ಸಂಶೋಧಕಿ :
ಡಾ. ಸುಶೀಲಾ ಪದ್ಮನಾಭ ಉಪಾಧ್ಯಾಯ
ಲೇಖಕರು : ಎಂ. ಜಾನಕಿ ಬ್ರಹ್ಮಾವರ

## ನಾಡಿಗೆ ನಮಸ್ಕಾರ

### ನಾಲ್ಕನೇ ಕಂತಿನ ಹತ್ತು ಹೊತ್ತಗೆಗಳು

ಕುಸುಮ ೩೧. ಸಾಂಸ್ಕೃತಿಕ ಚಿಂತಕ : ಕೆ.ಎಸ್.ಎನ್. ಅಡಿಗ
ಲೇಖಕರು : ಶ್ರೀನಿವಾಸ ದೇಶಪಾಂಡೆ

ಕುಸುಮ ೩೨. ಸಮಾಜಮುಖಿ ಯೋಜಕ : ಕೆ.ಕೆ. ಪೈ
ಲೇಖಕರು : ಕೆ. ಶಾರದಾ ಭಟ್

ಕುಸುಮ ೩೩. ರಾಜನೀತಿಯ ಅಪರಂಜಿ : ಡಾ. ಎ. ಸುಬ್ಬರಾವ್
ಲೇಖಕರು : ಅಡ್ದೂರು ಕೃಷ್ಣರಾವ್

ಕುಸುಮ ೩೪. ಕನ್ನಡ ಸೇನಾನಿ : ಪಿ.ಕೆ. ನಾರಾಯಣ
ಲೇಖಕರು : ಡಾ. ವರದಾ ಶ್ರೀನಿವಾಸ್

ಕುಸುಮ ೩೫. ಮೌಲ್ಯಾಧಾರಿತ ರಾಜಕಾರಣಿ : ಉಳ್ಳಾಲ ಶ್ರೀನಿವಾಸ ಮಲ್ಯ
ಲೇಖಕರು : ಬಸ್ತಿ ವಾಮನ ಶೆಣೈ

ಕುಸುಮ ೩೬. ವರ್ಣಚಿತ್ರ ಕಲಾವಿದ : ಪಾವಂಜೆ ಗೋಪಾಲಕೃಷ್ಣಯ್ಯ
ಲೇಖಕರು : ಶ್ರೀಮತಿ ಬಿ.ಎಂ. ರೋಹಿಣಿ

ಕುಸುಮ ೩೭. ಕನ್ನಡದ ಕಟ್ಟಾಳು : ಬಿ.ಎಂ. ಇದಿನಬ್ಬ
ಲೇಖಕರು : ವಿ.ಗ. ನಾಯಕ

ಕುಸುಮ ೩೮. ದೂರಸಂಪರ್ಕವನ್ನು ಸಮೀಪವಾಗಿಸಿದ ಅಧಿಕಾರಿ: ಕಜಂಪಾಡಿ ರಾಮ
ಲೇಖಕರು : ಧನಂಜಯ ಕುಂಬ್ಳೆ

ಕುಸುಮ ೩೯. ಹಿರಿಯ ಸಾಹಿತಿ : ಫ್ರಾನ್ಸಿಸ್ ದಾಂತಿ
ಲೇಖಕರು : ಸುಮುಖಾನಂದ ಜಲವಳ್ಳಿ

ಕುಸುಮ ೪೦. ಜಾನಪದ ವಿದ್ವಾಂಸ : ಬನ್ನಂಜೆ ಬಾಬು ಅಮೀನ್
ಲೇಖಕರು : ಡಾ. ಗಣನಾಥ ಎಕ್ಕಾರು

# ನಾಡಿಗೆ ನಮಸ್ಕಾರ

## ಐದನೇ ಕಂತಿನ ಹತ್ತು ಹೊತ್ತಗೆಗಳು

ಕುಸುಮ ೪೧. ಅನಂತಮುಖದ ಚೈತನ್ಯ : ಟಿ.ಎ. ಪೈ
ಲೇಖಕರು : ಕೆ.ಎಂ. ಉಡುಪ, ಮಣಿಪಾಲ

ಕುಸುಮ ೪೨. ನ್ಯಾಯ ನಿಷ್ಠುರದ ನ್ಯಾಯಾಧೀಶ : ಕೆ.ಎಸ್. ಹೆಗ್ಡೆ
ಲೇಖಕರು : ಶ್ರೀ ಮುದ್ರಾಡಿ, ನಿಟ್ಟೆ

ಕುಸುಮ ೪೩. ಗ್ರಾಮ ಸಬಲೀಕರಣ ಹರಿಕಾರ : ಕೆ.ಎಂ. ಉಡುಪ
ಲೇಖಕರು : ಬೆಳಗೋಡು ರಮೇಶ ಭಟ್ಟ, ಚೆನ್ನೈ

ಕುಸುಮ ೪೪. ನಿಷ್ಠುರ ವಿದ್ವಾಂಸ : ತೆಕ್ಕುಂಜ ಗೋಪಾಲಕೃಷ್ಣ ಭಟ್ಟ
ಲೇಖಕರು : ನಂದಳಿಕೆ ಬಾಲಚಂದ್ರ ರಾವ್

ಕುಸುಮ ೪೫. ಚೇರ್ಕಾಡಿಯ ಗಾಂಧಿ : ರಾಮಚಂದ್ರ ರಾವ್ ಚೇರ್ಕಾಡಿ
ಲೇಖಕರು : ಆರೂರು ಮಂಜುನಾಥ ರಾವ್

ಕುಸುಮ ೪೬. ಕೃಷಿಋಷಿ : ಡಾ. ಎಲ್.ಸಿ. ಸೋನ್ಸ್
ಲೇಖಕರು : ಶೇಖರ ಅಜೆಕಾರ್

ಕುಸುಮ ೪೭. ದಾಸರ ದಾಸ : ಭದ್ರಗಿರಿ ಅಚ್ಯುತದಾಸ
ಲೇಖಕರು : ಡಾ. ಕಬ್ಬಿನಾಲೆ ವಸಂತಭಾರದ್ವಾಜ್

ಕುಸುಮ ೪೮. ಕೊಡಗನ್ನು ಉಳಿಸಿದ ಕಲಾವಿದ : ಎನ್.ಎಸ್. ದೇವಿಪ್ರಸಾದ್ ಸಂಪಾಜೆ
ಲೇಖಕರು : ಪ್ರೊ. ಪ್ರಭಾಕರ ಶಿಶಿಲ

ಕುಸುಮ ೪೯. ಸ್ತ್ರೀಪರ ಚಿಂತಕಿ : ಪಂಡಿತ ರಮಾಬಾಯಿ ಸರಸ್ವತಿ
ಲೇಖಕರು : ಸೀತಾ ಬಾಪಟ್

ಕುಸುಮ ೫೦. ಚಂದಮಾಮದ ನವಗಿರಿನಂದ
ಲೇಖಕರು : ಶೇಷನಾರಾಯಣ



ಸೀತಾ ಬಾಪಟ್ ಶಿವಮೊಗ್ಗೆಯ ಸಾಗರದವರು. ತೌರ್ಮನೆ ಕಾರ್ಕಳದ ಮಾಳದಲ್ಲಿ ಮಂಗಲಾ ಆಗಿದ್ದವರು. ಉಪಾಧ್ಯಾಯರಾಗಿದ್ದ ನಾರಾಯಣ ಡೋಂಗ್ರೆ ತಂದೆ; ಸಂಗೀತಗಾರ್ತಿ ಪದ್ಮಾವತಿ ತಾಯಿ. ಮಾಳದಲ್ಲಿಯೇ ಪ್ರಾಥಮಿಕ ವಿದ್ಯಾಭ್ಯಾಸ. ಅನಂತರ ಕಾರ್ಕಳದ ಶ್ರೀ ಭುವನೇಂದ್ರ ಕಾಲೇಜಿನಲ್ಲಿ, ಆ ಮುಂದೆ ಧಾರವಾಡ ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವೀಧರೆ. ಈಗ ಕುವೆಂಪು ವಿ.ವಿ.ಯಿಂದ ಮನಃಶಾಸ್ತ್ರದಲ್ಲಿ ಎಂ.ಎ.ಗೆ ಸಿದ್ಧತೆ.

ಜೊತೆಗೆ ಸಂಗೀತದಲ್ಲೂ ಪರಿಣತಿ. ರಕ್ತಗತವಾದ ಕಲೆಗೆ ಅರ್ಹ ಗುರುಗಳಿಂದ ಸಂಸ್ಕಾರ. ಹಲವೆಡೆಗಳಿಂದ ಕಾರ್ಯಕ್ರಮಗಳಿಗೆ ಆಹ್ವಾನ. ಅಲ್ಲೆಲ್ಲ ಮೆಚ್ಚುಗೆ ಧಾರಾಳ.

ವಿವಾಹಾನಂತರ ಪತಿ ರಾಮಕೃಷ್ಣ ಬಾಪಟ್ ಅವರ ಪ್ರೋತ್ಸಾಹವೇ ಕಾರಣವಾಗಿ ಗಮಕ ಕಲೆಯಲ್ಲೂ ವಿಶೇಷ ಪರಿಶ್ರಮ. ನೀಡಿದ ಕಾರ್ಯಕ್ರಮಗಳ ಸಂಖ್ಯೆಯೂ ಅಪಾರ. ಬಹುಶಃ ಗಮಕದಲ್ಲಿ ಪ್ರಕೃತ ಹೆಣ್ಣುಮಕ್ಕಳ ಪೈಕಿ ಇವರು ಅದ್ವಿತೀಯ.

**ವಿ.ಗ. ನಾಯಕ**

**ಕಾಂತಾವರ ಕನ್ನಡ ಸಂಘ (ರಿ.)**
ಕಾಂತಾವರ - ೫೭೪ ೧೨೯
ಕಾರ್ಕಳ, ಉಡುಪಿ ಜಿಲ್ಲೆ